# ಚಂಡೆ ಮದ್ದಳೆ

ಗೋಪಾಲಕೃಷ್ಣ ಅಡಿಗ

ಜನಪ್ರಿಯ ಸಾಹಿತ್ಯ, ಪುತ್ತೂರು.

ಜನಪ್ರಿಯ ಸಾಹಿತ್ಯ-೩

# ಚಂಡೆ ಮದ್ದಳೆ

ಗೋಪಾಲಕೃಷ್ಣ ಅಡಿಗ



ಜನಪ್ರಿಯ ಸಾಹಿತ್ಯ, ಪುತ್ತೂರು, ದ. ಕ.

ಸಂಪಾದಕರು:

ಯಂ. ಬಿ. ಮರಕಿಣಿ

ಶಂ. ಪಾ. ದೈತೋಟ



ಮೊದಲ ಮುದ್ರಣ ೧೯೫೪





ಛಾಯಾ ಚಿತ್ರ

ಟಿ. ಎಸ್. ಸತ್ಯನ್

ಬೆಲೆ: ಒಂದು ರೂಪಾಯಿ

(ಕ್ಯಾಲಿಕೋ ಪ್ರತಿ ೨ ರೂಪಾಯಿ)

ಮುದ್ರಕರು:

ಚೇತನ ಮುದ್ರಾಲಯ

ಮೈ ಸೂ ರು.

# ನನ್ನ ಮಾತು.

---

ನನ್ನ ನಾಲ್ಕನೆಯ ಕವನ ಸಂಕಲನ 'ಚಂಡೆ-ಮದ್ದಳೆ' ಇಂದು ಪ್ರಕಟವಾಗುತ್ತಿದೆ. ಇದು ಇಷ್ಟು ಬೇಗ ಪ್ರಕಟವಾಗುವುದಕ್ಕೆ 'ಜನ ಪ್ರಿಯ ಸಾಹಿತ್ಯ'ದ ನನ್ನ ತರುಣಮಿತ್ರರ ಉತ್ಸಾಹ ವಿಶ್ವಾಸಗಳೇ ಕಾರಣ. ಇಲ್ಲಿನ ಹೆಚ್ಚಿನ ಕವನಗಳು ಬೇರೆ ಬೇರೆ ಪತ್ರಿಕೆಗಳಲ್ಲಿ ಆಗಲೇ ಬೆಳಕು ಕಂಡಿವೆ. ಆ ಎಲ್ಲ ಸಂಪಾದಕರಿಗೂ ನಾನು ಕೃತಜ್ಞ. 'ಗೊಂದಲ ಪುರ' ಎಂಬ ಕವನದಲ್ಲಿ ಅಲ್ಲಲ್ಲಿ ತಿದ್ದುಪಡಿಗಳನ್ನು ಸೂಚಿಸಿ ಸಹಕರಿಸಿದ ನನ್ನ ಮಿತ್ರರಾದ ಶ್ರೀ ಕೆ. ನರಸಿಂಹಮೂರ್ತಿ ಮತ್ತು ಶ್ರೀ ತ. ರಾ. ಸು. ಅವರ ಉಪಕಾರವನ್ನು ಇಲ್ಲಿ ನೆನೆಯುತ್ತೇನೆ. ಈ ಕವನ ಗ್ರಂಥದ ಮುದ್ರಣ, ಪ್ರೂಫ್ ಇತ್ಯಾದಿ ಎಲ್ಲ ಬಹಿರಂಗ ವ್ಯವಸ್ಥೆಯನ್ನೂ ನೋಡಿ ಕೊಂಡು ಗೆಳೆಯ ತ. ರಾ. ಸು. ಇನ್ನಷ್ಟು ಉಪಕಾರ ಮಾಡಿದ್ದಾರೆ. ಕಾವ್ಯಪ್ರಿಯರೂ ಉತ್ತಮ ವಿಮರ್ಶಕರೂ ಆದ ಶ್ರೀ ಕೆ. ನರಸಿಂಹಮೂರ್ತಿ ಯವರು ತಮ್ಮ ವಿಮರ್ಶ ಲೇಖನದಿಂದ ಈ ಪುಸ್ತಕದ ಬೆಲೆಯನ್ನು ಹೆಚ್ಚಿಸಿದ್ದಾರೆ. ಅವರ ಈ ಸಹಾಯವನ್ನು ಕೃತಜ್ಞತೆಯಿಂದ ನೆನೆಯುತ್ತೇನೆ.

**ಗೋ. ಕೃ. ಅ.**

ಪರಿವಿಡಿ......

ಹಿಮಗಿರಿಯ ಕಂದರ

ಗೊಂದಲಪುರ

ಯುಗಾದಿ

ದೀಪಾವಳಿ

ಏನಾದರೂ ಮಾಡುತಿರು ತಮ್ಮ

ನಂದನ

ಕೃಷ್ಣನ ಕೊಳಲು.

# ಹಿಮಗಿರಿಯ ಕಂದರ

ದಿನಮಪಿ ರಜನೀ ಸಾಯಂ ಪ್ರಾತಃ
ಶಿಶಿರವಸಂತೌ ಪುನರಾಯಾತಃ
ಕಾಲಃ ಕ್ರೀಡತಿ ಗಚ್ಛತ್ಯಾಯುಃ
ತದಪಿ ನ ಮುಂಚತ್ಯಾಶಾವಾಯುಃ ॥



ಹೊಗೆ, ಬೆಂಕಿ,
—ಅಯ್ಯೊ ಹಾಳಾಗ—
ಉರಿ, ಶಖೆ, ತಾಪ;
ಹೊರಗೆ ರಣರಣ ಬಿಸಿಲು, ಒಳಗೆ ಮಾರಣ ಬೆಂಕಿ.
ಮಲಗಿತ್ತು ಮನ ಚಿತೆಯ ಮೇಲೆ ಆಫೀಸಿನಲಿ.
ಭೂತಗನ್ನಡಿ ಬಿಸಿಲುಮುಚ್ಚು ಚುಚ್ಚಿತು ತಲೆಯ;
ಮಿದುಳು—ಬಚ್ಚಲ ಹಂಡೆಯಲ್ಲಿ ಬೇಯುವ ಆಮೆ—
ಎದ್ದೆದ್ದು ಬಿದ್ದು ಒದ್ದಾಡುತಿತ್ತು.
ಕಿಟಕಿಯಲಿ ಬೆಂಕಿಹೊಳೆ ಹರಿದು ಕುರ್ಚಿಯ ಮೇಲೆ
ಉರಿಕೆಂಡ; ಮೇಜು ಅಗ್ನಿಯ ಕುಂಡ; ಆಚೀಚೆ
ಕುಳಿತು ಕಮರುವ ಕ್ಲಾರ್ಕುಗಳ ಸುತ್ತ ಕೆನ್ನೀಲಿ
ಜೋಲುನಾಲಗೆ ನೆಕ್ಕುತಿತ್ತು ಪಚಪಚ ಪಚ್ಚ!

ಯುಗಯುಗದ ಘೈಲುಫೈಲನು ಹೇರಿದ ಕಪಾಟು
ಕುಸಿದು ಬೆನ್ನೆಲುಬು ಕಿರುಗುಟ್ಟುತಿತ್ತು.
ಖಟ್ಟಖಟ ನಿಟನಿಟಲ್—
ಬೊಂಬೊ? ಮೂಳೆಯ ಗಂಟೊ?
ಮಿಗ ಹಕ್ಕಿ ಹಣ್ಣು ಹೂ ತಳಿರ ತೇಗಿದ ಅಗ್ನಿ
ಖಾಂಡವದಿ ಮುಂದೇನು ಎನ್ನುತಿತ್ತು.
ಕಂಡು ಪುರುಷಾಕೃತಿಯ ಕುರ್ಚಿಮೇಲೆ
"ಅಯಿ ಜೀವಿತನಾಥ ಜೀವಸಿ?"
ಕೇಳಿದೆನು ಒಳಕುಳಿತ ಸಾಹೇಬನನ್ನು, "ಸಾರ್,
ಏನು ಯೋಚನೆ? ಏಕೆ, ಏಕೆ ಚಿಂತೆ?
ಆಡಿ, ಮಾತಾಡಿ!"
ಕಾಳಿದಾಸನು ತೇಲಿ ಬಂದು ಹೇಳಿದ ಹೀಗೆ:
"ಹರಕೋಪಾನಲಭಸ್ಮಕೇವಲಂ"

ನಾ ಬಂದ ದಾರಿಯಲಿ
ಮನೆಯ ಹತ್ತಿರದ ಆ ಗಟಾರದಂಚಿನ ಮೇಲೆ
ಮಲಗಿತ್ತು ಹೊಟ್ಟೆ ಮೇಲಾಗಿ ಹಳಸುವ ನಾಯಿ—
ಕತ್ತು ತಣಪಣ, ಕೊಕ್ಕೆ ಕಾಲು, ನಾಲಗೆ ನಿಂತ ಪೆಂಡ್ಯುಲಂ—
ರವಿಕಿರಣ ಬಂದು ಮೈದಡವಿ ಮುದ್ದಿಡುತಿತ್ತು;
ಪಂಚಾಗ್ನಿಮಧ್ಯೆ ನಡೆದಿತ್ತು ತಪ; ತೂಫಾನು
ತಾಪ ತಡಿಯೊಡೆದು ಮರಮರ ಮುಳುಗಿ ಮೇಲೆಲ್ಲ
ಗುಳುಗುಳಿಸುತಿತ್ತು.

ಆ ಅಗೊ, ಕಂಡೆ:
ಕಾಗೆ ಕುಕ್ಕಿದ ಕಪ್ಪೆ:
ಹೊಟ್ಟೆಬಿಳಿ ಮೇಲಾಗಿ, ಚಾಚಿ ತಬ್ಬಲಿಕಾಲ,
ಮಣ್ಣು ಮೆತ್ತಿದ ಮುಗ್ಧ ಕೈಯ ಆಗಸಕೆತ್ತಿ

ಕಾಯುತಿದೆ. ಒಳಬೆಂಕಿಯೊತ್ತಿ ಶಿಥಿಲಗ್ರಂಥಿ
ಬಿಚ್ಚುತಿದೆ ಕಿದಿತುದಿಯ ಕೆಂಡದಂತೆ.

ಮೊನ್ನೆ ಗೋತಾಹೊಡೆದನಲ್ಲ ಆ ಬಡಪಾಯಿ—
ಛತ್ರದ ಚರಂಡಿಬಳಿ ಹರಕುಚಂದಿಯ ಕೆಳಗೆ-
“ಹಂಸತೂಲಿಕೆಯ ಹಾಸಿಗೆ, ಗುಲಾಬಿಯ ದಿಂಬು,
ಕರ್ಪೂರಸುಂದರಿಯ ಕೂರ್ಪುರ, ಮಲ್ಲಿಗೆಕಂಪು,
ಓ ಕನಸಿನಿಂಪು!”
ಮಲಗಿದಾತನ ಬಂದು ಮಾತಾಡಿಸಿತ್ತು ನೊಣ;
ಕುಶಲ ಕೇಳಿತ್ತು ಕಟ್ಟಿರುವೆ ಗುಂಪು.

—ಬೆನ್ನಿಗಂಟಿದ ಹೊಟ್ಟೆ, ಹೊಟ್ಟೆಗಂಟಿದ್ದ ತಲೆ;
ತಲೆಯಲಿ ಠಳಾಯಿಸಿತ್ತೊಂದು ತೋಳ.
ನರನರದ ಮೋರಿಯಲಿ ಇಲಿ ಹೆಗ್ಗಣದ ಮೇಳ;
ಮೃಗಶಾಲೆಗೇಟು ತೆಗೆದಿತ್ತು ಅಗಲ!
“ಅಯ್ಯೋ ಸ್ವಾಮಿ, ಅನಾಥ! ಕೊಡಿ ಮೂರು ಕಾಸ;
ಸುಡಬೇಕು; ಬಡಪಾಯಿ! ಸೀಡಿ ಧರ್ಮ.
ನನಗೂ ಇವಗೂ ಇತ್ತು ಬಹಳ ಇಸ್ವಾಸ;
ಏನು ಮಾಡಲಿ ಹೇಳಿ ಅವರವರ ಕರ್ಮ.”

ಎಸೆದು ಮೂರೇ ಕಾಸ, ನಡೆದೆ ನಾ. ಬೊಂಬುಗಳ
ಮೇಲೆ ನಡಸುತ್ತ ತುಸು ಜಂಬೂಸವಾರಿ.
ಮಲಗಿ ಕಟ್ಟಿಗೆಮಂಚದಲ್ಲಿ ಮುಚ್ಚಿದೆ ಕಣ್ಣ:
ಅರಳಿತ್ತು ಕೊರಡುಕೊರಡಲ್ಲು ಕೆಂಚನೆ ಹೂವು;
ಚಾಚಿ ತೋಳನು ಬೆಂಕಿ ಬಿಗಿಯುತಿತ್ತು.

ಅಡರಿತ್ತು ನಭಕೆ ಧೂಮೋಲ್ಲಾಸ; ಧಗಧಗನೆ
ತಕ್ಕತಕ್ಕೆಂದಿತ್ತು ಜ್ವಾಲೆ; ಜಯಭೇರಿ ಹೊಡೆ

ಹೊಡೆದುಘೋ ಎಂದು ಕುಣಿದಿತ್ತು ದಳ್ಳುರಿ; ನೀರ
ಕಾರಿ ಮರುಗಿತ್ತು ಹಸಿಸೌದೆ; ಬೇಯುವ ನನ್ನ
ಹೀರಿ ಗಹಗಹಿಸಿತ್ತು ಗಾಳಿಗೂಳಿ
ನಾಗಾಲ ಬುಗುರಿ ಗಿರಗಿರನೆ ತಿರುಗಿ.

ಆಫೀಸು ಬೇಡ; ಹೊರಡುವೆ; ಹೊರಟೆ ಈ ಕ್ಷಣವೆ!
“ಎಲ್ಲಿಗೆ? ಏತಕೆ? ಬೇಡ, ಬೇಡ!”
ಬೇಕಿದೆ ತಂಪು, ತಂಽಪು!
ನರನೇತ್ರರನು ಗಡ್ಡೆಕಟ್ಟಿಸಿ ತಟ್ಟಿ
ಮಲಗಿಸುವ ತಂಪು, ಓ, ಹೊರಟೆ, ಹೊರಟೇಬಿಟ್ಟೆ.

ತಣ್ಣಗೆ ಕೊರೆವ ಬೆಳ್ಳಿಯಿಳಿಜಾರು, ಹಿಮಹರ್ಮ್ಯ;
ತಿಂಗಳಿನ ಹೋಳು ಬೋದಿಗೆ, ಬೆಳ್ಮುಗಿಲ ಸೂರು;
ಮಂಜುಗಡ್ಡೆಯ ಕಿಂಡಿ, ಕದ, ಜಂತಿ, ಮಾಳಿಗೆ;
ಹಾಲುಖೋವದ ಮಧುರ ನೆಲಗಟ್ಟು.
ಅಲ್ಲಿ ರಿಫ್ರಿಜಿರೇಟರಿನ ಖಾನಿಯಲ್ಲಿ ಹಳಸದ ತಿಂಡಿ
ಸರ್ವದಾ ಸಿದ್ಧ; ಸರ್ವತ್ರ ಶುಚಿ, ರುಚಿ, ತಂಪು:
ಐಸ್‌ಕ್ರೀಮು, ಫ್ರೂಟ್‌ಸಲಾಡ್, ಬಾಸುಂದಿ, ಐಸ್‌ಕ್ಯಾಂಡಿ.
ಹೋಗಬೇಕಯ್ಯ ಒಂದೇ ಒಂದು ಸಲ ಸಾಕು.
ಚಾಚಿ ಕಾಲನು ಮೆತ್ತೆಮೇಲೆ ಕುಳಿತೆಲೆ ಮಾಣಿ
ಅದನು ತಾ, ಇದನು ತಾ, ಒಂದು ಪ್ಲೇಟ್, ಎರಡು ಪ್ಲೇಟ್,
ಮೂರು ಪ್ಲೇಟ್, ನೂರಾರು........
ಆದರಯ್ಯೋ ಜೇಬಲಿಲ್ಲವೋ ಚಿಕ್ಕಾಸು.
ಅಪ್ಪ ಬಿಟ್ಟದ್ದು ಬರಿಸೊನ್ನೆ; ಅವ ಕೊಟ್ಟದ್ದು
ಸೊನ್ನೆಗೂ ಸೊನ್ನೆ; ನಾ ಪಡೆದದ್ದು ಬರಿ ಗೋಲ!

ಹೊರಗೆ ಅಗ್ನಿಪ್ರಳಯದಲ್ಲಿ ತೇಲುವ ಕಲ್ಲು—
ಬೆಂಚಿನಲಿ ಕುಳಿತು ನಿಟ್ಟುಸಿರು ಬಿಟ್ಟೆ:

“ ಪುನರಪಿ ಜನನಂ ಪುನರಪಿ ಮರಣಂ
ಪುನರಪಿ ಜನನೀಜಠರೇ ಶಯನಂ
ಇಹ ಸಂಸಾರೇ ಖಲು ದುಸ್ತಾರೇ
ಕೃಪಯಾಪಾರೇ ಪಾಹಿ ಮುರಾರೇ!”

## ೨

ಕರೆಯುತಿದೆ ಹಿಮಗಿರಿಯ ಕಂದರ:
“ ಬಂದೆಯಾ, ಮಗು, ಬಂದೆಯಾ!”

ನಡೆಯೊ ಅಲ್ಲಿಗೆ ಮುಚ್ಚಿದೆವೆಮೇಲೆ ತಂಗಾಳಿ
ತಿಂಗಳನು ಲೇಪಿಸುವ ಪರ್ಣಕುಟಿಗೆ;
ಸಿಪ್ಪೆತಿರುಳಿರದ ಬರಿ ಬೀಜ ಕುಪ್ಪಳಿಸಿರುವ
ತಿನದ ತೇಗಿನ ಮೂಕ ಸರಿಗಮಕ್ಕೆ

ಏಕವರ್ಣದವರ್ಣನೀಯ ಶಾಂತಿಯ ತಂತಿ
ಮಿಾಟುತಿರೆ ಅಲ್ಲಲ್ಲಿ ಹಸುರ ಬೆರಳು
ದೇವಲೋಕದ ಪಕ್ಷಿ ಬಂದು ಕೊಂಕಲು ಕೊರಳು
ಅರಳುವುದು ಮಂದಾರಗೀತದುರುಳು.
ನಾರದರ ತುಂಬುರರ ತಂಬೂರಿದನಿ ತುಳುಕಿ
ತುಂಬುತಿದೆ ಹಿಮಗಿರಿಯ ಹಳ್ಳಕೊಳ್ಳ;
ಅಶ್ವತ್ಥವೃಕ್ಷಗಳ ಛಾಯೆ ಚಾವಡಿಯಲ್ಲಿ
ಕುಳಿತು ತಲೆದೂಗುತಿವೆ ಯೋಗವೆಲ್ಲ.

ಹಿಮದ ಹಂದರದಲ್ಲಿ ಗಾಳಿಬೀಳಿನ ಮೇಲೆ
ಉಯ್ಯಾಲಾಡುವ ಬೆಳ್ಳಿಗಡ್ಡಸಾಲು;
ಸರ್ಚ್‌ಲೈಟು ಕಣ್ಣುಗಳು ಹೊಳೆವ ಕಗ್ಗವಿ ಬಾಯಿ;
ನಿನ್ನ ನೆಲಮಾಳಿಗೆಯ ತೆರೆದು ತೋರು.

ಕಾಲನಿಟ್ಟಲ್ಲಲ್ಲಿ ಕೀಲುಗುದುರೆ ಸವಾರಿ,
ಕೈಚಾಚಿದಲ್ಲೆಲ್ಲ ಸ್ವಿಚ್ಚು, ಸ್ವಿಚ್ಚು;
ಎಲ್ಲಿ ತಿರುಗಿದರಲ್ಲಿ ಅಮೃತ ಸೂಸುವ ನಲ್ಲಿ—
ಈ ಕಛೇರಿಗೆ ಮನೆಗೆ ಬೆಂಕಿಹಚ್ಚು!

೭

ಟಿಕ್, ಟಿಕ್, ಟಿಕ್, ಟಿಕ್ ....
ಎಲ್ಲಿ ಇತ್ತೀ ವಾಚು?
ಕೀ ಕೊಟ್ಟುದಿದಕೆಷ್ಟು ಜನ್ಮದಾಚೆ?
ಈಗ ಗಕ್ಕನೆ ರೆಕ್ಕೆ ಬಡಿದು ಬಂದಿತು ಇಗೋ
ಕುಕ್ಕುತಿದೆ ಕರುಳನ್ನು—ತಡೆಯಲಾರೆ.

ಹತ್ತಾಳು ಅಡಿ ಹೂತು ಹೆಣವ ಹಾಕಿದೆ ಗಾರೆ;
ಮೇಲೆ ಕುರ್ಚಿಯನಿಟ್ಟು ಮೇಜ ಮೇಲೆ
ಚಾಚಿ ಕಾಲನು 'ಟೈಂಸ್ ಆಫ್ ಇಂಡಿಯಾ' ಚಾಪಲ್ಯ
ಜುಬ್ಬನೆತ್ತುತ್ತಲಿರೆ ಹಲ್ಲುಕಿರಿದು—
ಕಣ್ಣೆದುರು ನಡೆದಿದೆ ವಿಮಾನದಪಘಾತ; ಇಗೊ
ಕಂಬಿ ತಪ್ಪಿದ ರೈಲು ಬಿತ್ತು ಕೆಳಗೆ;
ಹೊಟ್ಟೆಗಿಲ್ಲದೆ ಅವಳು ಮಗುವ ಬಾವಿಗೆ ನೂಕಿ
ಹಾರಿದಳನಾಥೆ ಈ ಜನ್ಮ ರೋಸಿ—
ಸದ್ದು! ಮೂಳೆಯ ರಾಶಿಮೇಲೆ ಜಿರಳೆಯ ನಡಿಗೆ!
ಹೂತವನ ಉಸಿರ ಕಸಿವಿಸಿ, ಹಿಮ್ಮಡಿಗೆ ತಾಗಿ
ಹಬ್ಬುವೊಲು ವಿಷ, ಮೇಲಕೇರುತಿತ್ತು;
ಹೊರಳುವುರುಳುವ ಹೆಣದ ನಿಶ್ಶಬ್ದ ಶಬ್ದ ತಿನಿ-
ದಿತ್ತು ಕುಂಡೆಯ ಮುಂಡೆ ಕೊಡವಿ ಎದ್ದೆ.

ಢಮರು ಢಮುಢಮ ಢಮ್ಮೃಢಮ್ಮೃ—ದೂರದ ಬೆಟ್ಟ-
ದಿಳಿಜಾರು ಮುಸುಗುಟ್ಟಿ ಮಾರಿಜಾತ್ರೆ
ಇಳಿದುಬರುತೇರೇರುತಿತ್ತು ಡಬಡಬ ಢಬ್ಬ—
ಕಿವಿಗಿಟ್ಟು ಬೆರಳ, ಹಾ, ಮುಚ್ಚು ಮುಚ್ಚು;
ಕುರಿಯ ಕೊರಳಿನ ಗಂಟೆ ಮೊಳಗಿ ಬಲಿಮರವಾಜಿ
ಹಸಿದ ಕತ್ತಿಯ ಹಲ್ಲು ಕಟೆಯುತಿತ್ತು.

ಮಲಗಿದೆವೆಗಳ ನಡುವೆ ಕನಸುನವೆಗಳನೂರಿ
ಕಗ್ಗವಿಯ ಬಚ್ಚುಬಾಯ್ದೆರೆಗೆ ಟಾರ್ಚನು ತೂರಿ
ಬುರುಡೆಯೊಳಗೊಂದೆರಡು ಜಿರಳೆಗಳನಿಟ್ಟು
ಹೊಟ್ಟೆಯೊಳಗೊಂದಿಷ್ಟು ಹರಳೆಣ್ಣೆ ಬಿಟ್ಟು
ಮಾಂಸಸಾಂಬ್ರಾಣಿಬಾಲಕೆ ಕಕ್ಕಡವ ಕಟ್ಟಿ
ಕಿವಿಯ ಸುತ್ತಲು ಢೋಲು ಡಮರು ತಮ್ಮಟೆ ಚಂಡೆ
ಬಡಿದು ಬಾರಿಸಿ ಪಾಂಚಜನ್ಯ ಮೊಳಗಿ
ಕಣ್ಣೆದಿರು ಸತ್ತು ಸಾಯದ ಹೆಣದ ಮೆರವಣಿಗೆ:
ಕೃಷ್ಣ ಶಂಕರ ಬುದ್ಧ ರಮಣ ಅಲ್ಲಮ ರೈಕ್ವ
ಯಾಜ್ಞವಲ್ಕ್ಯ ವಿದೇಹ ಯೇಸು ಜಾಬಾಲಿ—
ಕಗ್ಗವಿಯ ಹೊಟ್ಟೆ ತೊಳಸುವ ಲಕ್ಷದೀಪರುಚಿ—
ಛಟ ಛಟಿಂದಾಡಿತ್ತು ಬಾಣ ಬಿರುಸು;
ಗುಡುಗು ಗುಡುಗಿತು, ಸಿಡಿಲು ಸಿಡಿದು ಫಳ್ ಫಳ್ಳೆಂದು
ಮಿಂಚು ಕೋರೈಸಿ ಮನ ಗೋಡೆಬಿದ್ದು
ನುಗ್ಗಿ ಬಂದಿತ್ತೊಳಗೆ ಹಳ್ಳಕೊಳ್ಳದ ನೆಗಸು—
‘ಬಂದ್ಹಾಂಗ ಮೈಯ್ಯಾಗ’ ಪಾತ್ರಿ ಮೈ ಕೈ ಕುಲುಕಿ
ಸೈಬೇರಿಯಾದ ಹಿಮಭಾಷೆಯುಲಿದ;
ಹೊಸನುಡಿಯ ನುಡಿಕಟ್ಟನುಗಿದು ನೆಗೆದ;
ಹರಿದ ಢೋಲಿನ ತೂತು ಡಬ್ಬಡಬ್ಬೆಂದಿತ್ತು,
ತಂತಿ ಫಟ್ ಎಂದೇಕತಾರಿ ಮುಲುಕಿತ್ತು:

‘ ಹಿಮಗಿರಿಯ ಕಂದರ,
ಆ ಶ್ವೇತಸುಂದರ.’

೪

ಏಕಾದಶೀ ದಿವಸ ಉಪವಾಸ ನಿಂದಿರಾ?
ಅವಲಕ್ಕಿ, ಉಪ್ಪಿಟ್ಟು, ಹಳದಿಯ ಅನ್ನ ಮೆಂದಿರಾ?
ನಾರಾಯಣಾ, ಗೋವಿಂದ, ಶಿವಶಿವಾ ಎಂದಿರಾ?
‘ನಾಹಂ ಕರ್ತಾ’ ‘ಬ್ರಹ್ಮಾರ್ಪಣಂ’ ಲೊಚಗುಟ್ಟಿಕೊಂಡಿರಾ?
ಸರಿ, ಸರಿ; ನೀವೇ ಸರಿ. ಕಿವಿ ಮುಟ್ಟಿ ನೋಡಿದಿರ?
ಮೂಡಿತಲ್ಲವೆ ಹೇಳಿ ಕಿವಿಗೆ ರೆಪ್ಪೆ!
ಈ ಕೂಗ ಕೇಳುವರೆ ನೀವು ಬೆಪ್ಪೆ?

ಇಲ್ಲ? ನಿಮ್ಮದು ಮಠ ಅದೆಲ್ಲಿ? ಕೇಳಿಸಲಿಲ್ಲ.
ಮಾಸ್ಕೋವೆ? ಸರಿ, ಸರಿ. ಬೈಸ್ಕೋಪಿಗೆ
ಹೋಗಿ ತೆರೆನೆರಳೊಡನೆ ಆಡಿ ಕುಸ್ತಿ;
ಇರಲಿ ನಿಮಗೂ ಕೂಡ ಸ್ವಸ್ತಿ ಸ್ವಸ್ತಿ!

ನನಗೊ!—
ತಂತಿಟಪ್ಪಾಲುಪೇದೆಯ ಸೈಕಲಿನ ಗಂಟೆ!
(ಭಾನುವಾರವು ತಪ್ಪಲಿಲ್ಲ ತಂಟೆ)
ಏಕೆ, ಏನಣ್ಣ, ಅಹ, ಕುಳಿತೆಬಿಟ್ಟೆ?
ಏನು, ಟಪ್ಪಾಲುಪೇದೆಯೊ, ಅಮೀನನೊ? ಕೆಟ್ಟೆ!
ಒದ್ದೆಪಂಚೆಯ ಕಾಟ—ಉಂಟೆ, ಉಂಟೆ?
ಕಾಫಿ ಮಾಡಿಸಲೆ? ಸಿಗರೇಟು ತರಿಸಲೆ? ಇಲ್ಲ,
ಅವಲಕ್ಕಿ ಮೊಸರಷ್ಟು ಕಲಸಿಕೊಡಲೇ?
ರಾತ್ರಿ ರೈಲಿಗೆ ಸೆಕೆಂಡ್ ಕ್ಲಾಸ್ ರಿಸರ್ವ್ ಮಾಡಿಸಲೆ?
ಬೇಡ? ಪರಮಾಶ್ಚರ್ಯ! ಗಂಟು ಮೂಟೆಯ ಕಟ್ಟಿ

ನಾನೆ ಈ ಮನೆ ಬಿಟ್ಟು ಹೊರಡಬೇಕೆ?
ಬಿಳಿಯ ಚಿಗುರೆಲೆ ಅಡಿಕೆ, ಸುತ್ತ ಮೆತ್ತನೆ ದಿಂಬು,
ಬಂದು ಬಿದ್ದಿದೆ ಇಲ್ಲಿ ದಿನಪತ್ರಿಕೆ;
ತುಟಿತೊಡೆಯ ಸುಟಿಮುದ್ದು ಕೈ ಚಾಚಿದಲ್ಲೆ ಇದೆ
ಮೈಚಾಚಿದಲ್ಲೆ ಹೂಹಾಸಿಗೆ ಇದೆ.
ಸಂಜೆ ‘ಗಾಯತ್ರಿ’ ಯಲಿ ಚಿತ್ರ; ಕಾಫಿ, ಮಸಾಲೆ
ದೋಸೆ; ಆಡೆನ್ ಬರೆದ ನವ್ಯಕವಿತೆ;
ಅರಬಿಂದೊ ‘ಲೈಫ್ ಡಿವೈನ್,’ ‘ಟ್ರೂರೊಮಾನ್ಸಸ್,’ ಗೀತೆ;
ಇಲ್ಲಿ ರಸ್ಸೆಲ್, ಅಲ್ಲಿ ಕಾಫ್ಕ, ಹಕ್ಸ್ಲೀ—
ಮೂಳೆಕರಗವ ಹೊತ್ತು ಕುಲುಕುತಿರುವನು ಡೊಂಬ;
ಅಯ್ಯೊ ತಡೆಯೋ - ಅಣ್ಣ - ಕೊಂಚ ತಡೆಯೋ!
ಲೋಭಾನ ಹೊಗೆಯ ನಗೆಮುಗು ಬೀದಿ ಪೋಲೀಸು
ದಾರಿ ತಡೆವುದು; ನೂರು ಬಸ್ಸು, ಕಾರು.
ಏನು, ಬರಲೇಬೇಕೆ? ಬೇಕೆ? ಬರುವೆನು ನಾಳೆ;
ಆಗದೆ? ಮುಗಿಯದೇ ನಿನ್ನ ರಗಳೆ:

“ಕರೆಯುತಿದ ಹಿಮಗಿರಿಯ ಕಂದರ,
ಬಂದೆಯಾ—ಮಗು—ಬಂದೆಯಾ?”

## ೫

ಫೋಂ ಫೋ ಫೋಂ-ಕಾರು; ಭೋಂ ಭೋಂ-ಬಸ್ಸು, ಟ್ರಕ್ಕು;
ಬೀದಿ ಲಕ್ವಾಹೊಡೆದು ಮಿಡುಕುತಿತ್ತು;
ಖಟ್ಟ ಖಟ ಖಟಖಟ್ಟ—ಹತ್ತು ಎತ್ತಿನ ಗಾಡಿ!
ಮೂಗು ಮುಚ್ಚಿಕೊ: ನಗರಸಭೆಯ ಲಾರಿ.
“ಬದನೆಕಾಯಿ, ಬೆಂಡೆಕಾಯಿ, ಸೊಪ್ಪು, ಮೆಂತ್ಯದ ಸೊಪ್ಪು,
ಚಕ್ಕೋತನ ಸೊಪ್ಪು, ಹರಿವೇ ಸೊಪ್ಪು, ಅವರೆ, ಮೂಲಂಗಿ”

“ಬೇಕೆ ಕಡಲೇಕಾಯಿ, ಪುರಿ, ಪುಟಾಣಿ....
ಪಾವಿಗೊಂದೇ ಆಣೆ, ತೆಕಣೆ, ತೆಕಣೆ”
“ರಿಪೇರಿ, ರಿಪೇರಿ, ಛತ್ರಿ ರಿಪೇರಿ....
ಬೀಗ ರಿಪೇರಿ,
ಟ್ರಂಕು ರಿಪೇರಿ, ರಿಪೇರಿ, ರಿಪೇರಿ....”
ಮನೆ ಹುಡುಗರೆಲ್ಲ ಗೇಟಾಚೆ ಕಾದರು ಕೂಡ
ದಿನವೆಲ್ಲ, ಆ ಅವನು ಬರಲೆ ಇಲ್ಲ:
“ತಲೆ ರಿಪೇರಿ?
“ಮುರಿದ ಮನ ರಿಪೇರಿ?
“ಉರಿದ ಎದೆ ರಿಪೇರಿ?”

ಎಲ್ಲಿ ಹೋದನು ಮುದುಕ? ಯಾವ ಬಡಗುಡಿಸಲಲಿ
ಯಾವ ಹಣತೆಯ ಮುಂದೆ ಅಡಗಿ ಕುಳಿತ?
ಕಾರು ಏರದ, ಗಾಡಿಕೂಡ ತಾಗದ ಯಾವ
ತಪ್ಪಲಿನ ಗುಹೆಯಲ್ಲಿ ವ್ಯೆಯ ಮರೆತ?

ಮೂಡಿದೆ ಗುಲಾಬಿದಳದಲಿ ಮುಳ್ಳು; ಸಂಪಗೆಯ
ಕಂಪಿನಲಿ ಕಾಳ್ಗಿಚ್ಚು ಬುಸುಗುಟ್ಟಿದೆ;
ಮೆತ್ತೆಯಲಿ ಕುಟುಕುತಿದೆ ನೂರು ಚೇಳಿನ ಕೊಂಡಿ;
ಹಾಲು ಹಾಲಾಹಲದ ಗುರಿ ಮುಟ್ಟಿದೆ.
ಕಾಳನಾಗರ ನೇತ್ರಭೀತ ಪರವಶ ಪಕ್ಷಿ
ಮತ್ತೆ ರೆಕ್ಕೆಯ ಬಿಚ್ಚಿ ಗರಿಗಟ್ಟಿದೆ.

ರತಿತನೂಲಚ್ಛಾಯೆಯಲ್ಲಿ ಬಿಚ್ಚಿತು ಬೋಧಿ-
ವೃಕ್ಷವಗ್ನಿಯ ಛತ್ರಿ—ಕೊನೆಯ ರಾತ್ರಿ!
ನಿದ್ದಿಸಿವ ಮುದ್ದುಮಗುವನು ತಬ್ಬಿ ಕಣ್ಣಿಂದ,
ಕದ್ದು ಅವಳೆಡೆ ಸತ್ತಮುತ್ತ ತೂರಿ,
ಎದ್ದು ನಿಂತೆನು ಕೋಟು ತೊಟ್ಟು ಚಪ್ಪಲಿ ಮೆಟ್ಟಿ—

ಅರ್ಜಂಟಿನಲ್ಲಿ ಕೈಕೊಟ್ಟಿತು ಅಲಾರವ್ಮು!
ಬಾರಿಸಿತು ಮುಂಜಾನೆಯಾರು ಗಂಟೆ;
ಸಡಲಿತ್ತು ಬಿಗಿದಿದ್ದ ಮಣ್ಣ ಹೆಂಟೆ;
ಜಗಭಾರವಾಗಿತ್ತು ಕೊರಳ ಕುಂಟೆ—

ಸಿಗರೇಟು ಪ್ಯಾಕೆಲ್ಲ ಖಾಲಿ, ಖಾಲಿ;
ಬರದೆ ಹೋದನು ಮಾತುಕೊಟ್ಟ ಚೆನ್ನ, ಹಮಾಲಿ!
ಹೋಗುವುದೊ ಅರ್ಜಂಟು.
ಹೊರಬೇಕೆ ಈ ಗಂಟು?
ಬಂತಲ್ಲ ಗ್ರಹಚಾರ!
ಹೋಗಬೇಕೆ?
ಕಾಫಿ ಕುಡಿಯದೆ ರೈಲು ಹತ್ತಬೇಕೇ?—
ಹತ್ತಿ
ಹೋಗಬೇಕೆ?

ಭಗ್ನ ಸೇತುವೆಯಾಚೆ ರೈಲು ನಿಂತು
ಸೀಟಿ ಹಾಕಿತು ಮೂರು ಬಾರಿ; ಹೊರಟಿತು ಹಿಂದೆ;
ಎದ್ದ ಕೈಮರ ಬಿದ್ದು ಜೋಲುತಿತ್ತು;
ಮುಲುಕಿ ಗಾಲಿಯು ದೂರ ಕಿರಲುತಿತ್ತು:

"ಹಿಮಗಿರಿಯ ಕಂದರ....
ಗಿರಿಯ ಕಂದರ....
ಕಂ....ದ....ರ....
....ದ....ರ....
....ರ...."

ಸೆಪ್ಟಂಬರ್ ೧೯೫೨.



# ಗೊಂದಲಪುರ

"........ it is a tale
Told by an idiot, full of sound and fury
Signifying nothing.

—Shakespeare (Macbeth Act V. Sc. IV.)

ಮಬ್ಬು,
ಕಾಮಾಲೆ ಕತ್ತಲು.
ಬಂದು ಮೈಮೇಲೆ ಅಬ್ಬರಿಸಿ ಎದ್ದೆದ್ದು ಬಿದ್ದು ಬೊಬ್ಬರಿದಲೆವ
ಕಾರ್ಮೋಡ
(ಕುಡಿದುಬಿಟ್ಟಿದೆ ಕಣೋ, ಕಡಲಪಡಖಾನೆಯಲಿ ನೊರೆಗರೆವ ವ್ಹಿಸ್ಕಿ
ಸೋಡಾ)
ಚಾಚಿ ತನ್ನ ಕಬಂಧಕೈಯ ಫೇರಾಯಿಸಿದೆ—ಮಾಯಾಬಜಾರ ಫೋಡಾ.
ಕಬಳಿಸಿತು ದಂಡಕಾರಣ್ಯ ಕಬ್ಬೊಗೆ ಸುತ್ತಿ ಕಲ್ಕತ್ತೆ ಬೊಂಬಾಯಿಯನ್ನು,
ಮದ್ರಾಸನ್ನು, ಬೆಂಗಳೂರನು, ಧಾರವಾಡವನ್ನು.
ಶೀತದೇಶದ ತೊನ್ನುಮಂಜು ಚೀರಟೆ ಹಕ್ಕಿ—ಚಿರ ಚಿರೋ ಚಿರಚಿರೋ—
ಕಾಶ್ಮೀರದಿಂದ ರಾಮೇಶ್ವರದ ತನಕವೂ.
ಹಾಕಿದೆ ಸುರಂಗ ಪ್ರತಿ ಹೆಜ್ಜೆ ಹೆಜ್ಜೆಗು ಕೆಳಗೆ; ಕ್ಯಾಕರಿಸಿ ಕೇಕೆ ಹಾಕುತ್ತ
ನಿಂತರು ಸುತ್ತ ಚಂಡಿ, ರಣಚಂಡಿ, ಚಾಮುಂಡಿ.
ಸುಗ್ಗಿಯಲ್ಲೂ ಒಂದು ಥರದ ಥಂಡಿ.
ಇಳುಕಲಲಿ ಬಿರಿಕುಂಟೆಯೊತ್ತಿ ಮುಲುಕಿತು ಕುಲುಕಿ ರೈಕ್ವ ಬೆಳಕಾಡಿದ್ದ
ಮುರುಕುಬಂಡಿ.

ಪೂರ್ವದಲ್ಲುದಿಸಿದ್ದ ಸೂರ್ಯ ಈಗ ಅಪೂರ್ವ;
ಅಪರಸಮುದ್ರಕೆ ಮಾರಿಹೋದನಲ್ಲ;
ಪರಕೆ ಪರದಾಡಿ ಕೆಸರಲ್ಲಿ ಕುಂಟುವ ಕಮಲ
ಇಹದ ಮಣ್ಣನು ಮುಕ್ಕಿ ಮುರುಟಿತಲ್ಲ.
ಲಕ್ಷೋಪಲಕ್ಷ ಅಳಿಗುಳಿಕಾರ ಪರಿವಾರ
ಹೊಟ್ಟೆಬೆಂಕಿಗೆ ರೆಕ್ಕೆ ಸುಟ್ಟಿತಲ್ಲ

ಮುಸುಕಿತು ಅಮಾಸೆ ಲೋಕಸ್ಪು ದಬದಬೆ ಗಲಭೆ
( ಜಗ್ಗಿ ಕಿತ್ತವರಾರು ತಮದ ತೂಬಿನ ಬೀಜ ?
ನುಗ್ಗಿ ಬಂದಿತ್ತೇನು ಯಮುನ ಕೋಣನ ಕೋಜು ? )
ಕೆಲಸವಿಲ್ಲದ ಗಿರಣಿ ಹಾಕಿ ಸುಳ್ಳೀ ಸೀಟಿ ಹೂಸುತಿದೆ ಹುಡಿಗಲಾಟೆ.
ಇರುಳ ಚಕ್ರವ್ಯೂಹದಲ್ಲಿ ಬೀಸುತ್ತಲಿದೆ ಕರ್ಣಕ್ಕೆ ಕುರುಡು ಸೋಟೆ.

ಶಿವ ಧ್ಯಾನಮಗ್ನ ; ಕೈಲಾಸದಲ್ಲಿ ಅವಿಘ್ನ
ಹಿಗ್ಗುತಿದೆ ಭೂತಗಣ ಬಂಟುನೃತ್ಯ ;
ನೊರಗಿವಿಯ ಶಾಪಕ್ಕೆ ಸೊರಗಿ ವಿಘ್ನೇಶ್ವರ
ಕಡುಬಿನಟ್ಟಕ್ಕಿಳಿದು ಕುಳಿತುಬಿಟ್ಟ.

ಮೂವತ್ತು ಕೋಟಿ ದೇಗುಲ ಶೂನ್ಯ ; ಶೂನ್ಯ ಗರ್ಭಗುಡಿ ;
ಭಗ್ನ ವಿಗ್ರಹ ಸ್ತಬ್ಧ ದೀಪನಾಡಿ ;
ಅಂಧಕಾಸುರ ಕೆದರಿ ಕೇಶ ಬಾರಿಸುತಿರುವ
ರುಗ್ಣಗಂಟೆಯ ನಗ್ನ ಘಂಟಾಮಣಿ.

ಗಾಳಿ ತುಂಬಾ ಸಿಡಿವ ಸುಡುವ ಗದ್ದಲ, ಕೊಟ್ಟಿಗೆಯ ನಾತ ;
ಕೊಟ್ಟಣವಲ್ಲಿ ಜಳ್ಳು ಕುಟ್ಟುವ ಸದ್ದು ;
ಎಣ್ಣೆಗಾಣದಿ ಮರಳನರೆವ ಕರಕರದ ಕರಕರೆ ; ಹುನೆಯ
ತೋಟವಲಿ ಕಲ್ಲುಕುಟ್ಟಿಗನಟಾಟೋಪ ; ಛಾವಣಿಮೇಲೆ

ಬಂಡೆ ಹೆಬ್ಬಂಡೆ ಚಳುವಳಿ; ಪಂಜುರ್ಲಿ, ಹಾಯ್ಗುಳಿ, ಬೊಬ್ಬರ್ಯ,
ಜಟ್ಟಿಗ—
—"ಎಲಲಲಲಲ ಕೇಽಽಹೂ"
ಎತ್ತಿ ಹೊರಟಿವೆ ಕರಿಪತಾಕೆ ಹಾಕುತ ಕೇಕೆ, ಊರೂರು ಕೇರಿ ಕೇರಿ.
ಅಂತರಿಕ್ಷದಲಿ ಅಂತರ್ಲಾಗ ಹಾಕುತಿವೆ, ಅರಚುನಾಲಗೆ, ಅಹಾ,
ಕಿರುಚುನಾಲಗೆ, ಒಹೋ, ತುರಿಚೆ ನಾಲಗೆ; ಕಳ್ಳ
ಕುಡಿದು ಬಡಿಯುತ್ತಲಿವೆ ಗಾಳಿ ಢೋಲ;
ಕತ್ತಲಿನ ಕಡಲು ಅಲ್ಲೋಲ, ಕಲ್ಲೋಲ.
ರಾತ್ರಿಯೆಲ್ಲಾ ಬಾಣ, ಬಿರುಸು, ಗರನಾಲು.
ನನ್ನ ಕಿವಿಗೇ ಜಡಿದು ಕನ್ನಿ ತಾಗಿಸಿ ಅಗ್ನಿ ಓಡಿತ್ತು ಕುರುಡುಕಾಲು:
ಮಿದುಳು ಪುಡಿ ಪುಡಿ; ಖಾಲಿಬುರುಡೆ; ಪಿಳಿಪಿಳಿ ಕುರುಡು ಗಾಜುಕಣ್ಣು;
ಕೀಲು ತಪ್ಪಿದ ಕಂಠಯಂತ್ರ ಆಗಿ ಅತಂತ್ರ ಕಂಬಿಬಿಟ್ಟೋಡಿತ್ತು
ಕೊರಕಲೆಡೆಗೆ.
ಗಳಿಗೆಗಿಪ್ಪತ್ತು ಅಪಘಾತ ಆಕಾಶದಲ್ಲಿ, ನೆಲದಲ್ಲಿ, ಪಾತಾಳದಲ್ಲಿ.
ಸಿಡಿದ ಮಿದುಳಿನ ಚೂರು ಪಡೆದು ಭೂತಾಕಾರ ಕೊರಳರೋಡೆಂಜಿನ್ನನೇರಿ
ಕುಳಿತು
ನೆಗೆದೆದ್ದು ಚಿಮ್ಮುತಿದೆ ಹಳ್ಳಿಪಟ್ಟಣದಲ್ಲಿ, ಗುಡಿ ಮಠ ಮಸೀದಿ
ಈಗರ್ಜಿಯಲ್ಲಿ;
ಶಾಲೆಕಾಲೇಜಿನಲ್ಲಿ;
ಸಭೆ ಮೆರವಣಿಗೆಯಲ್ಲಿ;
ಹೋಟಲಲ್ಲಿ, ಚಿತ್ರಮಂದಿರದಲಿ;
ಪಾರ್ಲಿಮೆಂಟಿನ ವೇದಿಕೆಯ ಮೇಲೆ ಪ್ರತಿಯೊಂದು ಪೀಠದಲ್ಲೂ ಮತ್ತೆ
ಗೋಪುರದ ಮೇಲೆ
ಬಾಯ್ಬಡಿದುಕೊಂಡು ಲಬೊಲಬೊ ಚೆಲ್ಲಿ ಕೀವನ್ನು
ಕ್ಷಣಕ್ಷಣಕೆ ಮತ್ತಷ್ಟು ಊದುತ್ತಿವೆ;
ಕೊಂಬು ಬಗ್ಗಿಸಿ ಸುತ್ತ ಹಾಯುತ್ತಿವೆ:

“ದಾರಿ ಬಿಡಿ, ದಾರಿ ಬಿಡಿ, ತೊಲಗಿರಾಚೆ;
ಕೂತವರು, ನಿಂತವರು, ಮಲಗಿಕೊಂಡವರು
ಏಳಿರೋ ಏಳಿ ಎದ್ದೇಳಿ, ನುಗ್ಗಿರಿ ಮುಂದೆ; ಕೂಗಿರೋ ಕೊರಳ ಸರೆ ಹರಿವತನಕ;
ಕುದುರೆಯೋ ಕತ್ತೆಯೋ ಮೋಟಾರೊ ಸೈಕಲ್ಲೊ ಇಲ್ಲ ಬರಿಗಾಲಿನಲ್ಲೋ
ಅಂತು ಓಡಿರಿ ಮುಂದೆ; ಕುಂತವರ ತುಳಿಯಿರೋ;
ಮೂಲೆಯಲಿ ಕೂತು ಯೋಚಿಸುತಿರುವ ಘಾತಕಾ, ಏಳು; ಇಲ್ಲವೊ ಮತ್ತೆ ಏಳಲಾರೆ!
ಎಲ್ಲಿಗೇತಕ್ಕೆ ಎಂದು ಕೇಳುವವ ಹೇಡಿ;
ತಾಳಿ ಎಂಬವನೊಬ್ಬ ದೊಡ್ಡ ಖೋಡಿ;
ಇದಿರು ಬರುವವಗಿಂತ ಇಲ್ಲ ಕೇಡಿ.
ಏನೆ ಬಂದರು ದಾರಿಗಡ್ಡ ಕತ್ತರಿಸಿ ಅದ, ಅವನ, ಕರಕರ ಎಂದು ತರಿದು ಕೊರಳಲಿ ಧರಿಸಿ ರುಂಡಮಾಲೆ;
ನಡುರಸ್ತೆಯಲ್ಲೆ, ಅಹ, ಪ್ರಳಯಲೀಲೆ.
ಮನೆಯೊಳಗೆ, ಗುಡಿಯೊಳಗೆ, ಶಾಲೆಯೊಳಗೇ ನೋಡಿ
ಹಾಯುತಿದೆ ನಮ್ಮ ರಸ್ತೆ;
(‘ಎಲೆಲೆಲೆ ರಸ್ತೆ, ಏನು ಅವ್ಯವಸ್ತೆ!’)
ಓಡುವವನೇ ಧೀರ, ಚೀರುವವನೇ ವೀರ, ಮನುಕುಲೋದ್ಧಾರಕ, ಮಹಾಗಭೀರ.
ಕಣ್ಣಪಟ್ಟಿಯ ಕುದುರೆ ನಮ್ಮ ದೇವರು (ಅಡ್ಡಬಿದ್ದೆ ಮಾಸ್ವಾಮಿ)
ಎರಡೆರಡ್ಲ ನಾಲ್ಕೆಂದು ಬೊಗಳುವ ರಿಯಾಕ್ಷನರಿಯ ತದಕು, ತರಿ, ಕಡಿ, ಕುಟ್ಟು,
ನಮ್ಮ ದೇವರ ಬಾಲಕವನ ಕಟ್ಟು;
ಚೂರು ಚೂರಾದನೋ? ಸರಿ, ಬಿಡಿ;
ಮಾನವ್ಯ ಚಿಗಿತುಕೊಂಡಿತು ಸತ್ತರೇನು ಹುಲುಮನುಜ!
ಏನು ಅವ ನಿನ್ನ ಅನುಜ?
ನೀನವನ ಅನುಜ?

ಇಂಥ ಬೂರ್ಜ್ವಾಬುದ್ಧಿಗೊಂದೆ ಮದ್ದು :
ಯಜ್ಞಪಶು ಅಜ; ಕಟ್ಟು ಬಾಯಿ; ಬಾರೋ ಯಾಜಿ, ಕೊಲ್ಲಿಸಿದ
ಗುದ್ದಿಗುದ್ದಿ;
ಇದರ ವಪೆ ಬಹಳ ಶುಚಿ; ದೇವಗಣಕಿದಕಿಂತ ಬೇರೆ ಇಲ್ಲವೊ ರುಚಿ;
ಬೇಡವೋ ಬೇರೆಯ ಹವಿಸ್ಸು.
ಹೀಗೆಯೇ ಇಳಿದು ಬರಲಿದೆ ನಮ್ಮ ಸ್ವರ್ಗ, ಅಪವರ್ಗ, ಈ ಬೀದಿಯಾಚೆ
ಕಡೆ ಮೂಲೆಯಲ್ಲಿ,
ನಮ್ಮ ಮನೆ ಮುಂದಿರುವ ಲಾಯದಲ್ಲಿ.
ಈ ನಾಳೆಮಾತ ನಂಬದ ಜನದ್ರೋಹಿಗಿಂಬಿಲ್ಲ ಈ ಕುಂಭಿನಿಯಲಿ;
ಮುಖ್ಯ ಬೇಕಾದದ್ದು ಓಟ, ಕೂಗಾಟ.
ಓಡಿರೋ ಓಡಿ, ಓಡಿ; ಕೂಗಿರೋ ಕೂಗಿ, ಕೂಗಿ."

ಬಿದ್ದವನು ಬಿದ್ದ, ಎದ್ದವನು ಎದ್ದ, ಪಂಥ ಕಟ್ಟಿ ಗೆದ್ದವನೊಬ್ಬ ಗೆದ್ದ;
ಕಾಲಬಲವಿಲ್ಲದ ಶಿಖಂಡಿ ನರಪೇತಲ ಗೊರಸು ತುಳಿತಕ್ಕೆ ಸಿಕ್ಕಿಬಿದ್ದ!
ಗೆದ್ದವಗು ಸಿದ್ಧವಿದೆ ಹೊಂಡ ಆಳುದ್ದ;
ಇದು ವಿಧಿಯ ವಹಿವಾಟಿಗಿಂತಲು ಅಬದ್ಧ.

CALL NO MAN HAPPY TILL HE DIES ೯೦

## ೨

### ಅಂಧೇನೈವ ನೀಯಮಾನೋ ಯಥಾಂಧಾಃ

ರಸ್ತೆಯಲ್ಲೋ ಮಸ್ತು ಜನ; ಇಲ್ಲ ಪುರಸೊತ್ತು;
ಮನೆಯಿಲ್ಲದಲೆವಪಾಪೋಲಿ ಗೂಳಿಯ ಮಸ್ತಿ;
ಬೀದಿ ದೀಪಗಳು ಕೊಟ್ಟವು ಗಸ್ತು; ಬಾನಲ್ಲಿ
ಮೋಡಪಟದಾಚೇನೊ ಮೇಜವಾನಿ;
ಕೆಳಗೋ ವೃಥಾ ಜೀವಭಾವ ಹಾನಿ.

ನೂಕು ನುಗ್ಗಲು ಪರಿಷೆ:
ನಿಮಿಷ ನಿಮಿಷಕ್ಕೊಂದು ವರಸೆ ಗುಟುರು ಗಲಾಟೆ ಮುಲುಕು ಛಳಕು.
ಏನು, 'ಬೇದಿಂಗ್ ಬ್ಯೂಟಿ' ಬೀದಿಯಲ್ಲೇ ತೆರಗೆ ಬಂದಳೇನು?
ವಾಲಿ ಸುಗ್ರೀವ ಕಾಳಗವಯ್ಯ, ಕೋಡಂಗಿ ಅಗಲೇ ತೆರೆಯಾಚೆ
ಬಂದನಯ್ಯ.

ಕಿಷ್ಕಿಂಥಕಾಂಡ ಬ್ರಹ್ಮಾಂಡ,
ದುಂದುಭಿ ಹೆಣದ ಸುತ್ತಲೂ ಮರ್ಕಟೋತ್ತಮರ ಎದೆದುಂದು ನೃತ್ಯ.
ಸಪ್ತಸಾಲದ ನೆರಳಿನಲ್ಲಿ ನಡೆದಿವೆ ಬಾಲವೆತ್ತಿ ಮುಲುಕುತ ನೂರು
ಹೆಣ್ಣುಕೋತಿ.
ಸುತ್ತಮುತ್ತಲ ರುಂಡಬುಂಡೆಯಲಿ ನೊರೆಗಳ್ಳು ಕುಡಿದು ಕುಣಿದಿದೆ
ಕೆಂಪುಕುಂಡೆ ಕೋತಿ
ಹೆಣ್ಣ ತೊಡೆಯರಸುತಿದೆ ಅದರ ಮೂತಿ.
ವಾಲಿಯೂಟದ ತಟ್ಟೆ ತಾರೆ ಟಣಟಣ ಚಿಮ್ಮಿ ಜಾರಿದಳು ಸುಗ್ರೀವ
ನಡಿಗೆಮನೆಗೆ.

ಕಿಷ್ಕಿಂಥದೆದೆಬಡಿತ ಮಂದ, ಮಂದ.
ಬರುವನೇ ರಾಮಚಂದ್ರ?
'ಬಂದಾನೊ ಬಾರನೊ ಓ'

ಮೋಟಾರು ಕಾರು, ಸಿಟಿಬಸ್ಸು, ಲಟಕಾಪಟಕ ಜಟಕ, ಒಂಟೆತ್ತು
ಗಾಡಿ;
ನಾಯಿ ನರಿ ಕತ್ತೆ ಹೈನಾ ಕುದುರೆ ಹುಲಿ ಚಿರತೆ ನರವಾನರರ ಮಂದೆ,
ಮಂದೆ.
ಕವಣೆ ತೂರಿದ ಹಾಗೆ ಹವಣರಿತು ಜಾರುತಿವೆ
ಒಂದಕೊಂದಕೆ ತಾಗಿ ತಾಗದಂತೇಗುತಿವೆ;
ಯಾವ ದಾರವೊ ಹಿಡಿದು ಜಗ್ಗುತ್ತಿದೆ.

ಮುಖಮುಖಕ್ಕೊಂದು ಮುಖವಾಡ; ಸಿಕ್ಕಿದೆ ನೋಡು
ಒಂದೊಂದು ಬಾಯಿಗೊಂದೊಂದು ಮೈಕ್ರೋಫೋನು

ಮುಖಮುಖದ ನಡುವೆ ಮಂಜಿನ ದಟ್ಟ ತೆರೆ; ಢಿಕ್ಕಿ
ಹೊಡೆದು ಫಕ್ಕನೆ ಬಿಕ್ಕು, ಕಿರಚು; ಅಯ್ಯೋ ಬಿದ್ದ, ಎದ್ದ, ನೆಗೆದೇ ಬಿದ್ದ.
ತುಳಿದು ಚೂರಾದವರ ಮೇಲೆ ಬಂತು ಸವಾರಿ ಕುದುರೆ, ಕುದುರೆಯ
ಹಿಂದೆ ಆನೆ, ಆನೆಯ ಹಿಂದೆ ರಥ, ರಥದ ಹಿಂದೆ ಮೋಟಾರು ಲಾರಿ.
(ಈಚೆಗೆ ಕ್ಷಣಕ್ಷಣಕ್ಕೊಂದು ಕುರಿ ಹೊಗ್ಗುತಿರೆ
ಆಚೆ ಅಪರಕ್ಷಣವೆ ಟನ್ನೊಳಪ್ಪುಟಮಾಂಸ
ನೀಡಲೆಂದೇ ಇಡೀ ಹಗಲಿರುಳು ದುಡಿದೇದಿ ಹೂಂಕರಿಸಿ ಗದರುತಿದೆ
ಸುರ ಚಿಕಾಗೋವಿನಲಿ ಅಸುರಯಂತ್ರ)

ಆಹಾ ನೋಡು, ಎಂಥ ಆಟ!
ಎದುರುಬದುರೇರೇರಿ ಕಾರುಕಾರುಗಳ ಹೋರಾಟ;
ಟಾಂಗಾದ ಮೇಲೆ ಮೋಟಾರಿನೇರಾಟ;
ದಾರಿಗರ ಮೇಲೆ ಸೈಕಲ್ಲು; ಸೈಕಲ್ಲ ಮೇಲೆ ಎತ್ತಿನ ಗಾಡಿ;
ಗಾಡಿ ಮೇಲಕೆ ಬಿತ್ತು ಜೀಪು;
ಹಾಕು ಮದ್ದಳೆಕರಣೆ ಮೇಲೆ ಛಾಪು!
ವ್ಹಾರೆವಾ, ಭಾಪು, ಭಾಪು!

ನನ್ನ ಕಿರುಮನೆ ಕಿಟಕಿ ಬಳಿ ಹಿಡಿದು ಕೈದೀಪ
ನಾನು ಸಾಕ್ಷೀಭೂತ ನಿಂತೆ ನಡುಗಡ್ಡೆಯಲ್ಲಿ;
ಸುತ್ತ ಸೈರನ್ನುಗೀತಕ್ಕೆ ಎದೆಬುಡ ನಡುಗಿ
ಕಿವಿಗೆ ಜಡಿದೆನು ಮೇಣದುಂಡೆ, ಭಡವಾ.
ಕುಳಿತೆ ಕುರ್ಚಿಯ ಮೇಲೆ ತೆರೆದು ಹಳೆ ಡೈರಿಯನು
ಮಗಚುತ್ತ ನಡೆದೆ ಒಂದೊಂದೆ ಪುಟವ.

## ಗಿಳಿಯು ಪಂಜರದೊಳಿಲ್ಲ.

ಅಕ್ಕ ನಿನ್ನ ಮಾತು ಕೇಳಿ
ಚಿಕ್ಕದೊಂದು ಗಿಣಿಯ ಸಾಕಿದೆ;
ಅಕ್ಕನಿಲ್ಲದ ವೇಳೆಯಲ್ಲಿ
ಬೆಕ್ಕು ಕೊಂಡು ಹೋಯಿತಯ್ಯೋ—ಗಿಳಿಯು ಪಂಜರದೊಳಿಲ್ಲ.

ಹದಿನಾರು ವರ್ಷಗಳ ಹಿಂದೆ:
ಬಾ, ಬಾ, ಬಾ ಎಂದು ಕರೆದಿತ್ತು ಹಸುರುಕೊಕ್ಕಿನ ಹಕ್ಕಿ ನನ್ನ ಕರುಳನು ಮೂರು ಬಾರಿ ಕುಕ್ಕಿ,
ಚಿಗುರುಗೊಂಬಿನ ಹುಂಬಮನ ಮೂಸಿ ಮಣ್ಣ ನೆಗೆದಿತ್ತು ನಾಗಾಲೋಟ ಗಾಳಿಗುಂಟ.
ಕೊಡೆವಿಮಾನದಿ ತೇಲಿ ತೇಲಿ ಹೇಗೋ ಬಿದ್ದೆ
ಹೂಬಳ್ಳಿ ಗಿಡಗಹನ ಪೊದರು ಮರ ಹುರಿ ಹೆಣೆದ ತಂಗೊಳದ ತಡಿಹುಲ್ಲ ಹಾಸಿನಲ್ಲಿ,
ವನದ ಜಘನಸ್ಥಳದ ವಿವೃತಸುಖಜಾಲದಲ್ಲಿ
ತುಟಿದಡಕ್ಕಂಟ ಮೊಲೆಬಳಿ ಲಂಗರಿಟ್ಟಾಡಿ ಹೊಕ್ಕುಳಿನ ಸುಳಿಯಲ್ಲಿ ಹೊಕ್ಕು ಜಾರಿ,
ಸೊಂಟಸುಂಟರಗಾಳಿಯಲ್ಲಿ ಗಿರಗಿರ ಬುಗುರಿ; ತೊಡೆ ಬಂಡೆಗಪ್ಪಳಿಸಿ ಭಗ್ನ ನೌಕೆ:
ಕನಸು ರಾಬಿನ್ಸನ್‌ಕ್ರುಸೋ ದ್ವೀಪದಲ್ಲಿದ್ದು ಕರಗಿದೆ ಸ್ವಯಂಪ್ರಭೆಯ ಕುಹರದಲ್ಲಿ.
"ಒಡಲ ನೂಲಿನಿಂದ ನೇಯುವಂತೆ ಜೇಡ ಜಾಲ."
ನಿದ್ದೆ, ಸುಖನಿದ್ದೆ. ಬೆಳಗಿನ ಝಾವ.
ಕಣ್ಣಿನೊಳಗಡೆ ತಾಳ ತಂಬೂರಿ ನೂಪುರ, ಪ್ಯಾಂಡ್ಸ್‌ಕ್ರೀಮು, ಓಡೀಕೊಲೋನ್ ಕುಟಿಕುರಾ!

ಮರಿಗಿಳಿ ಮರಿಗಿಳಿ ಮಲಗಿಲ್ಲಿ
ಚಂದದ ತೊಟ್ಟಿಲ ಮರೆಯಲ್ಲಿ.

ಹಿಂಡಬಿಟ್ಟೋಡಿದ್ದ ಮರಿ ಹೊಕ್ಕ ಗುಹೆಯಲ್ಲಿ
ಹಾಡಿತ್ತು ದುಂಬಿ ಅಂತರಗಂಗೆ ಲಾಲಿ;
ತಿನ್ನಿಸಿತು ಪಿಕ ಜೋಗುಳದ ಅಫೀಮು.
ಖಾಲಿ ಬುರುಡೆಯ ಮೇಲೆ ಎದೆಯ ವಿಪರೀತ ರತಿ.
ಭಾವಾತಿಸಾರರೋಗಕ್ಕೆ ನುಂಗಿದೆ ಬಾಟ್ಲಿ ಬಾಟ್ಲಿ ಮದ್ದು;
ಚುಚ್ಚಿದಿಂಜಕ್ಷನ್ನಿಗಯ್ಯೊ ಕಿಸೆ ತೂತುಬಿದ್ದು
ಮುಂಗೈಯ ಮೇಲೆ ಕಂಗಾಲ ಹೃದಯವನಿರಿಸಿ
ಬೆಂಗಾವಲೆಂದು ಜಂಭದ ಕೋಳಿಯನು ತರಿಸಿ
ಅಂಗಾಂಗದಲ್ಲಿ ಛಳಿಜ್ವರದ ಭಂಗಿಯ ಮೆರಸಿ
ಸಿಂಗಾರಕೆಂದು ಕಣ್ಣಲ್ಲಿ ನಲ್ಲಿಯ ತೆರಸಿ
ನಡೆದಿದ್ದೆ ಬಾಜಾಬಜಂತ್ರಿಜೊತೆ ದಿಗ್ದೇಶ.
ಸುಸ್ತಾಗಿ ಕೊನೆಗು ಅಸ್ತವ್ಯಸ್ತ ಬಿದ್ದಿರಲು
ಸಿಕ್ಕಿದಾಮೆಯ ಚಿಪ್ಪಿನೊಳಗೆ ಹೊಕ್ಕೆ.
ಆಗಾಗ ಮೂತಿ ಹೊರಹಾಕಿ ಹೀರುತ ಗಾಳಿ
ನಾರ್ಸಿಸಸ್ಸಿನ ಡ್ರೆಸ್ಸು ಹಾಕಿ ಇದ್ದೆನು ಖಾಲಿ
ಕಳೆದಿತ್ತು ಹತ್ತು ವರ್ಷ.

ಆಗ ಬಿದ್ದಿತ್ತು ಭಾರೀ ಏಟು; ಚಿಪ್ಪೊಡೆದು ಆಗಿ ಚೆಲ್ಲಾಪಿಲ್ಲಿ
ತಲೆ ಜಜ್ಜಿ ಮೈ ಅಜ್ಜಿಬಜ್ಜಿ;
ಎಂಥ ಬಿರುಗಾಳಿ ಮಾರಾಯ. ಅದು ದೈತ್ಯ
ಝೂಡಮಾಲಿಯೆ ಥೇಟು. ತೊಟ್ಟು ಕರಿ ಲಾಂಕೋಟು
ನೆಲದ ಕೊಳೆಕಸವೆಲ್ಲ ಎತ್ತಿ ಆಕಾಶಕ್ಕೆ ಎಸೆದುದಷ್ಟೇ ಅಲ್ಲ
ಮರಗಿಡವ ಕಲ್ಲ ಬೆಟ್ಟವ ಕೂಡ ಗುಡಿಸಿತ್ತು
ಮೇಲಕೆಸೆದಿತ್ತು
(ಮತ್ತೆ ಕೆಳಬಿದ್ದಿತ್ತು, ಝೂಡಮಾಲಿಯೆ ಬಿದ್ದ ಬೇಸ್ತು)

ಕಡಕೊಂಡು ಬಿದ್ದ ಮಳೆಬಿಲ್ಲು ಮಂಡೆಯ ಮೇಲೆ
ಮಿದುಳು ನುಂಗಿತ್ತೊಂದೆ ಬಣ್ಣ—ಕೆಂಪು.
ಕಣ್ಣೆಲ್ಲ ಬರಿ ಕೆಂಪು; ಬಾಯಿಬಿಟ್ಟರೆ ರಕ್ತಕೇಡು;
ಕಾಲನಿಟ್ಟಲ್ಲೆಲ್ಲ ಕೆಂಪುಹೆಜ್ಜೆ.
ಮೂಗಿನ ಕಮಾನೇರಿ ಕೂತು ಘೂಕ್ಕೆಂದಿತ್ತು ಕೆಂಪುಗಾಜಿನ ಮೋಜು
ಕನ್ನಡಕ, ತಲೆಹಿಡುಕ.
ಬಂದು ಬಿದ್ದಿದ್ದೆ ನಡುಬೀದಿಯಲ್ಲಿ:
ಅಲ್ಲಿ ಬರಿ ರುಂಡಮುಂಡಗಳ ಖಾಡಾಖಾಡಿ,
ಕೋಟುಬೂಟುಗಳ ಪ್ಯಾಂಟುಗಳ ಕುಕ್ಕುಟನೃತ್ಯ;
'ತೇಲಿ ಬರುವ ಜಾಸ್ ಗಾನ ನಮ್ಮ ಕುಣಿತಕಲ್ಲವೇನ?'

ಬೂಟುಗಳ ಕೆಳಗೆ ಹಾಸಿತ್ತು ಹಪ್ಪಳ ಹೊಟ್ಟೆ ಸಾಲು ಸಾಲು;
ತುಪ್ಪಟವ ಕತ್ತರಿಸಿ ತೆಗೆದ ಕುರಿ ಥಂಡಿಯಲಿ ತತ್ತರಿಸಿ ಕೊಕ್ಕೆ ಕೈಕಾಲು;
ಕಾರ್ಖಾನೆಕೂಲಿ ಮೈ ಜಿಗಣೆ ಭೋಜನಶಾಲೆ;
ತೊಟ್ಟೂ ಬಿಡದೆ ಹಿಂಡಿಬಿಟ್ಟ ಕೆಚ್ಚಲ ಕುಟ್ಟೆ ಗುಮ್ಮುತಿದೆ ಕರುಹೆಸರ
ತೊಟ್ಟ ಮೂಳೆ.
ಉಳುವವರ ಎದೆಗೆ ಹಾಕಿತ್ತು ರಬ್ಬರ್‌ಟ್ಯೂಬು ಒಂದೆರಡು ಮೈಲಿ ಉದ್ದ,
ಅದರಾಚೆ ತುದಿಯಲ್ಲಿ ಕುಳಿತು ಹೀರುತ್ತಿದ್ದ ರಕ್ತಮದ್ಯವನೊಬ್ಬ, ಅಬ್ಬಬ್ಬ,
ಒಂಟೆಯ ಡುಬ್ಬ,
ಗುಂಡೋದರನ ಪಟ್ಟಶಿಷ್ಯ ಧಾಂಡಿಗ ಜುಬ್ಬ:

ಮೈಯೆಲ್ಲ ಜೇಬು; ಜೇಬಲ್ಲೆ ಮಡಗಿತ್ತು ಮಿದುಳು;
ಎದೆ ಸುರಂಗದಿ ಕಂಡೆ ರಿಂಗಾವರ್ಮ, ಕೊಕ್ಕೆಹುಳು;
ಹೊಟ್ಟೆಯಲಿ ಹೆಪ್ಪುನೆತ್ತರ ತಿಜೋರಿ;
ಒಟಗುಟ್ಟುತಿದ್ದ ಪ್ರತಿನಿಮಿಷಕಿಪ್ಪತ್ತು ಬಾರಿ;
"ಸಹನಾವವತು, ಸಹ ನೌ ಭುನಕ್ತು"
ಪಿತ್ಥವೇರಿತ್ತು ನೆತ್ತಿಗೆ ನನಗೆ; ಭಾರಿ ಸುತ್ತಿಗೆ ಬೀಸಿ
ಕುಟ್ಟಿ ಪುಡಿಯಾಗಿತ್ತು ತಲೆ; ಮಸೆದ ಕುಡುಗೋಲು

ಕಿತ್ತು ಕರುಳನ್ನೆಲ್ಲ ಕುತ್ತಿಗೆಗೆ ಸುತ್ತಿತ್ತು;
ಪ್ರಳಯ ರುದ್ರನ ರೋಷವೇಷ ಪೊಗದಸ್ತು.
(ಕೆಣ್ಣೆದುರು ಆಕಾಶದುದ್ದ ನಿಂತಿದ್ದ ಕನ್ನಡಿಯಲ್ಲಿ ನನ್ನ ಮುಖ
ಕಾಣಲಿಲ್ಲ)
ರೋಷಾಗ್ನಿ ಕೆಂಗುಡಿಯನೆತ್ತಿ, ಕಬ್ಬೊಗೆಯ ಮಸಿ ಹತ್ತಿ
ಗಬ್ಬವಾಗಿತ್ತು ಕಾಗದ ದಸ್ತು, ದಸ್ತು.
ದಿನದಿನಕೆ ಸ್ಕಂದಪತ್ಯ ಆಪತ್ತು, ಕುತ್ತು.
ಹೊರಗೆ ಚೆಲ್ಲಾಪಿಲ್ಲಿ ಬಿದ್ದು ಅರಚುತ್ತಿತ್ತು ಮುದ್ದೆಮಾಂಸದ ಚೂರು
ಚೂರು ಎಳವೊಗರು.

ಲಕ್ಷೋಪಲಕ್ಷ ಹಸಿವಿುದುಳು ರಸ್ತೆಯ ತುಂಬ;
ಕೋಟಿಗಟ್ಟಲೆ ಹಸಿದ ಹೊಟ್ಟೆ ಸೂತ್ರದ ಗೊಂಬೆ.
ಕತ್ತುಕತ್ತನು ಸುತ್ತಿ ಬಿಗಿದು ಝಣಝಣಿಸಿತ್ತು ಹನುಮಂತಬಾಲದಂತುದ್ದ
ಸರಪಣಿ ಅದರ
ಕೊಂಡಿ ಹಿಡಿದೆದೆ ಚಾಚಿ ಕೈಬೀಸಿ ನಡೆದಿದ್ದ—
ಅವನೇ 'ಪಶೂನಾಂ ಪತಿ'.
ಅವನು ನಿಂತರೆ ನಿಂತು, ಅವನೋಡಿದರೆ ಓಡಿ,
ಅವ ಮೂಲೆ ತಿರುಗಿದರೆ ತಾವೂ ತಿರುಗಿ
ನೆಗೆನೆಗೆದು ಹೂಂಕರಿಸಿ ಹಾರುತಿದ್ದವು ಗೊಂಬೆ
ನಾನು ಹತ್ತಿರ ನಿಂತು ಕಣ್ಣುಬಿಟ್ಟೆ:

ಯಾರಿವನು ನಾಯಕ?
ದೀನ ದುಃಖಿ ದರಿದ್ರಕೋಟಿ ದುಃಖತ್ರಾತ,
ಆರ್ತರಕ್ಷಕ ಈ ಅನಾಥಬಂಧು?
ಏ, ಎಲಾ, ಇದು ಎಂಥದಯ್ಯ, ಈ ಹೊಸ ಜಂತು?
(ಅವತಾರ ಲೋಕಕ್ಕು ಮಿಕ್ಕಿತಲ್ಲ!)
ರೋಬಟ್ಟು, ನರಯಂತ್ರ?

ಸುಟ್ಟ ಬೀಜದಿ ಹುಟ್ಟಿಬಂದ ಜಾಲಿಯ ಮರ?
ಕಣ್ಣೊ? ಕಣ್ಣೊ ಹೌದು, ಕಣ್ಣಲ್ಲ—ಹೈ ವೋಲ್ಟೇಜು ಬಲ್ಬು!
ಕಾಲೊ, ಸ್ಟೀಮ್‌ರೋಲರೋ! ಹೃದಯವೋ ರುಬ್ಬುಗುಂಡೋ?
ತಲೆಯೊಳತ್ಯಾಧುನಿಕ ಗೋಡೆಗಡಿಯಾರದೊಳ ಕರುಳಂತದೇನೋನೊ
ತಂತಿ ತಂತ್ರ;
ಹೊಟ್ಟೆಯೊಳಗಿದ್ದಿರಲು ಬೇಕು ಮಾರಣ ಗಿರಣಿ.
ಬಾಯಿಹೊಗೆಕೊಳವೆಯಿಂದೆದ್ದು ಕವಿಯುತ್ತಿತ್ತು ವಿಷವಾಯು ಕಣಜ
ಹೊಗೆ;

ಮೃಗಶಾಲೆ ನಾತವೋ ಸತತ ಹೊರಗೆ
(ರೇಶ್ಮೆಗಿರಣಿಯ ಸುತ್ತ ಬೆಂದ ಹುಳು ಪರಿಮಳ!)
ಮಾತು ಕೂಡಾ ಆಡುತಿತ್ತು ಯಂತ್ರ:
"ಡೌನ್‌ವಿದ್, ಡೌನ್‌ವಿದ್, ಯುನೈಟ್, ಯುನೈಟ್,
ಧಿಕ್ಕಾರ, ಧಿಕ್ಕಾರ;
ಹೊಡಿ, ಬಡಿ, ಕಡಿ, ಕೊಲ್ಲು; ಹಾಕು ಲಾಗ, ಕಿರಿ ಹಲ್ಲ;
ರೈಟ್ ಟರ್ನ್, ಲೆಫ್ಟ್ ಟರ್ನ್, ಕ್ವಿಕ್ ಮಾರ್ಚ್"
ಸುತ್ತಲೂ ಹತ್ತಾರು ಮಂದಿ ಬಾಲವ ಕಾಲಸಂದಿಗಿಕ್ಕಿ,
ತಲೆಬುರುಡೆ ತೆಗೆದು ಬಾಲಕ್ಕೆ ಸೆಕ್ಕಿ;
ಕುಣಿಯುತಿದ್ದರು ನಾಯಿನೃತ್ಯ;
ನಡುನಡುವೆ ನಿಂತು ತಲೆಬಾಗಿ ಆರತಿ ಎತ್ತಿ
ಮಿದುಳ ತುಂಡನ್ನವನ ಬಾಯಿಗಿಟ್ಟರು, ಅಹಾ, ಎಂಥ ಸದ್ಭಕ್ತಿ!
ಗೋವಿಂದಾ, ಗೋವಿಂದಾss
ತಿರುಪತಿ ವೆಂಕಟರಮಣನ ಪಾದಕ್ಕೇ
ಗೋವಿಂದಾss ಗೋವಿಂದ.

"ಅಲ್ಲಿ ಕಾಣುವುದಲ್ಲ ಆ ಬೆಟ್ಟತುದಿ ನಾವು ಮುಟ್ಟಿದರೆ ಸಾಕು; ಈ
ಮರಳುಗಾಡನ್ನಷ್ಟು ದಾಟದರೆ ಸಾಕು;
ಅಲ್ಲಿ ಹೇಸರಕತ್ತೆ ಜೂಜಿನ ಕುದುರೆಯಾಗಿ

ಜಾಲಿಮರವೇ ಕಲ್ಪವೃಕ್ಷವಾಗಿ,
ಮರಳು ಬಂಗಾರ ಕಣ; ತೊರೆಯೆಲ್ಲ ಹಾಲು ಹೊಳೆ,
ನೆಲವೆಲ್ಲ ಬರಿ ಭತ್ತ ಗೋಧಿ ರಾಗಿ!"

ಎಂದ ನಾಲ್ಕನೆಯವನ (ಆವನೂ ಪುಢಾರಿ ಜನ)
ಕಣ್ಣು ಮೂರನೆಯವನ ಮೇಲೇ ಸದಾ;
"ಜಾರಬಾರದೆ ಪಾಪಿ ಕೊಂಚ, ಪಾತಾಳಕ್ಕೆ ಮೆಟ್ಟಿ ಮಾಡುವೆನವನ ಚಟ್ನಿ.
ಯಾವಾಗಲೂ ನನ್ನ ಮೇಲೇ ಇವನ ಕಣ್ಣು, ನಡೆವಾಗಲೂ, ಪೂಜೆ
ನಡೆವಾಗಲೂ;
ಅವನು ಸಾಯದೆ ನಾನು ಬದುಕಲೆಂತು?
ಸುಲಿಗೆ ನಿಲುವುದೆಂತು?
ಸ್ವರ್ಗ ಮೊಳೆವುದೆಂತು?
ಲೋಕ ಉಳಿವುದೆಂತು?"

ಮನದ ಬೆಳವಣಿಗೆ ಹದಿನೆಂಟಕ್ಕೆ ಕಟ್ಟಾಗಿ
ಬೇಲಿಮೇಲಿನ ಕಳ್ಳಿ ಗುಜ್ಜು, ಗುಜ್ಜು;
ಮುರಿದರೊಂದಷ್ಟು ಬಿಳಿಸೊನೆ, ರಕ್ತವೇ ಇಲ್ಲ;
ಹೂವ, ಚಿಗುರಿನ, ಹಣ್ಣ ಮೆಲುಪ ಕಂಡಿಲ್ಲ.
ದುಂಬಿಯೊಲವಿನ ಗೀತ ಮಿಂಚಿನಪ್ಪುಗೆಯಲ್ಲಿ
ಹಮ್ಮಿನೆದೆ ಕರಗಿ ಹಸಿಯಾಗಲಿಲ್ಲ.
ಮೊಗ್ಗೆ ಮಕ್ಕಳ ಅಳುವ ನಗುವ ಅಂತರ್ಗಂಗೆ
ಬಾಳ ಹೊಲದಲಿ ಹಸುರನುಸುರಲಿಲ್ಲ.
ಎದೆಮರಳುಕಾಡಲ್ಲಿ ವಿಷದೂಟಿ ಚಿಮ್ಮುತಿರೆ
ಕಲ್ಪವೃಕ್ಷದ ಭಂಗಿ ತಳೆವ ಈ ಜಡೆಕಳ್ಳಿ.
ಹಾಸ್ಯಕರುಣದ ಬೆರಕೆ ನರಕಯಂತ್ರ.

ಹಿಂಬಾಲಕರು ಬಹಳ ಹುಂಬ ಜನ; ದೇಗುಲದ
ಗರ್ಭಗುಡಿಯಲ್ಲಿರುವ ದೇವರಂತೆ:

ಅಭಿಷೇಕ ಮಾಡಿದರೆ ಸ್ನಾನ; ಏನೋ ಅಷ್ಟು ನೈವೇದ್ಯ ನೀಡಿದರೆ
ಭೋಜನ;
ವರ್ಷಕ್ಕೊಮ್ಮೆ ಪಟ್ಟೆಯುಡಿಸಿದರಷ್ಟೆ ಬಟ್ಟೆ.
ಪ್ರಾರ್ಥನೆ, ಕೀರ್ತನೆ, ಪೂಜೆ—ಇಷ್ಟಕೆ ಸದಾ ಸಂತೃಪ್ತ.
ರೋಬಟ್ಟು ಹಿಡಿದ ಸರಪಣಿ ಗಟ್ಟಿ ಇದ್ದರಷ್ಟೇ ಸಾಕು ದೇವ
ಕೈಬಿಡುವನಲ್ಲ!
ಕಲ್ಲು ದೇವರನೆಲ್ಲಿ ಕೂರಿಸಿದರೇನು ಮಹ?
ಗುಡಿಸಲೆಷ್ಟೋ ಅಷ್ಟೆ ಅರಮನೆ ಸಹಾ?
ಗುಡಿಸಲೇ ಸಾಕಲ್ಲ! ಭಕ್ತಪರಿವಾರಕ್ಕೆ ಯಾವ ಕಾಲಕು ಏನೂ
ಕೊರತೆಯಿಲ್ಲ.
ಕಂಡು ಹಾಗೇ ನಾನು ಹೌಹಾರಿ ವ್ಯೆಮರೆತೆ;
ಮೆರವಣಿಗೆ ಸಾಗಿತ್ತು ತಾಳಬದ್ಧ.
“ ಸತ್ತರೇನು, ಮನುಜ ಅತ್ತರೇನು?
ಮನುಕುಲದ ಮನೆಯ ಪಂಚಾಂಗವಿದ್ದರೆ ಸಾಕು ಭದ್ರ, ಸಾಯಲಿ ಈ
ದರಿದ್ರ!”
ಯಾರದೋ (ಗುಂಡೋದರನದೆ ಇರಬೇಕಲ್ಲ) ಕಾರಲ್ಲಿ ಮಲಗಿ
ಬಂದವನೀಗ ಆಸ್ಪತ್ರೆ ಮಂಚದಲಿ ಕಣ್ಣು ತೆರೆದೆ;
ಕಂಡಿದ್ದ ಮೆಲುಕಾಡಿ ತಲೆಯ ಕೆರೆದೆ:—
ಸರಪಣಿಯ ನಡೆ ದಾರಿ ಗುರಿ ದಂಡಕಾರಣ್ಯ,
ಖರದೂಷಣತ್ರಿಶಿರ ನೆರೆವ ಠಾಣ್ಯ;
ಮನದಿ ಕಗ್ಗಾಡು ನಳನಳಿಸುತಿರೆ, ನಾಲಗೆಯ
ಮೇಲೆ ನಂದನ ಚಿಗುರಿ ಬರುವುದುಂಟೆ?
ಎದೆಯಲಿ ಹಿರಣ್ಯಾಕ್ಷಪೀಠ ಸುಸ್ಥಿರವಿರಲು
ಬುರುಡೆಯಲಿ ಪ್ರಹ್ಲಾದ ಪುಟವುದುಂಟೆ?
ಬಸಿದ ನೆತ್ತರ ಮಡುವಿನಲ್ಲಿ ಕೊಬ್ಬಿದ ಮಾನ- ಹೀನಕೆರಗುತ್ತಿದೆ
ದೊಡ್ಡ ಹದ್ದು;
ಕಪ್ಪೆಯನು ಕುಕ್ಕಿ ತಿನ್ನುವ ಕಾಗೆ ಪಕ್ಕಕ್ಕೆ ಫಕ್ಕನಿಳಿವುದು ಕತ್ತಲಿಂದ
ಸರಳು;

ಡೊಳ್ಳು ಹೊಟ್ಟೆಯ ಥೈಲಿ ಕಿತ್ತು ಕೊಬ್ಬಿನ ಅಸ್ಥಿಪಂಜರವ, ಅಗೋ
ನೋಡು ಹೇಗೆ ಬೆಳೆಯುತ್ತಲಿದೆ ದುಂಡು, ದುಂಡು :
ಮೂಳೆಯೆಲ್ಲಾ ಹೂತು ಮಾಂಸಪರ್ವತದಲ್ಲಿ ಗುಹೆಗಣ್ಣಿನಲಿ ಲೋಭ
ತೋಳ ತೆವಲು.
ಹೊಟ್ಟೆ ಚೆಂಡಿಗೆ ಪಂಪು ಹೊಡೆವಷ್ಟರಲ್ಲಿಯೇ ಮನಬುನಾದಿಗೆ ನೂರು
ಕನ್ನಕಿಂಡಿ.
ಕಪ್ಪೆತೂಕದ ವೃತ್ತಿ ಕಂಡು ನಕ್ಕೆನು. ಇಲ್ಲ,
ಯುಗಯುಗಕ್ಕೂ ತ್ರಾಸು ಸಮತೂಕವಾಗಲಿಲ್ಲ;
ಅದ ಕಂಡು ಅಳುಮರಸಿ ನಕ್ಕೆ ಕೊಂಚ.
ನಾಯಿಬಾಲಕೆ ನಳಿಗೆ ಹಾಕಿ ಕೂತಾಸಾಮಿ ಕನಸಿನಲಿ ಖಂಡಿತಾ
ಕಂಡಿದ್ದೆ, ಕಂಡಿದ್ದ
ನಿಗುರುಬಾಲದ ಕಂತ್ರಿನಾಯಿ.

೪

## ರಕ್ಷಮಾಂ ಪುರುಷೋತ್ತಮ

ಎಂಥ ಶಖೆ ಅಂತೀಯ! ಕೆಂಡದೊಳಗಡೆ ಕಂತ
ಹೂತ ಬದನೆಯಕಾಯಿಯಂತೆ ಮೈ; ಮೈತುಂಬ
ಜಿನುಗುತಿದೆ ತಿಗಣೆ ಬೆವರಿನ ಕಟಕಿ; ಹಣೆಪಾಚಿಗಲ್ಲಲ್ಲಿ
ಜಾರಿ ಬಾಚುತ್ತಲಿದೆ ಜೋಮುಗ್ಗೈ; ಜೇವೊಡೆದ ಬಿಲ್ಲನಾರಿಯ ಹಾಗೆ
ನರ ವಿಕಂಪಿಸಿ ಸ್ಲೈಡು ಸ್ಲೈಡು ಜಾರುತ್ತಲಿದೆ ಅಂತಃಪಟದ ಮೇಲೆ.
'ಮನ ಹತ್ತಿ ಉರಿದರೆಲ್ಲೋಡಬಹುದೋ?'

ಎವೆಗೆ ಎವೆ ತಗಲದಣ್ಣಾ, ಕಣ್ಣಕಣದಲ್ಲಿ
ಡೈನಾಸರಸ್ಸು, ಡ್ರೇಗನ್ನು, ಡೇಗೆ;
ಕಂಡು ಕೇಳದ ಪಕ್ಷಿ, ಮೃಗ; ಗಂಡಭೇರುಂಡ;

ಒಳಗೆ ಟ್ರೋಜನ್ ಕುದುರೆ ಚಿಂತೆ, ಯವನವಿಕಾರ;
"ಕುತಸ್ತ್ವಾ ಕಶ್ಮಲಮಿದಂ ವಿಷಮೇ...."

ಬಂದು ವಕ್ಕರಿಸಿಯೇ ಬಿಟ್ಟ ಅಕ್ಕಟ ಸೊಳ್ಳೆ ಸಂಗೀತಗಾರ;
ಕೈ ಪಿಟೀಲ ಕಮಾನ ಮೇಲೆ ಮಿದುಳನು ಸಿಲುಬೆಗಿಕ್ಕಿಸುವ
ಪೈಲೇಟ ಪ್ರಶ್ನೆಯೊಲು ಅರ್ಥಾವರುದ್ಧ, ಕರ್ಣವಿರುದ್ಧ ಗುಂಗುಂ ನಾದ;
ಬೇಡ ದಮ್ಮಯ್ಯ ಎಂದರು ಬಿಡದೆ ಸಂಗೀತ ಗೀತ ಸಂದೇಶ ಗಂಧಕ
ಗಂಧಾನುಲೇಪನಕೆ ಸಿದ್ಧ ಈ ಬುದ್ಧ, ಅನಿರುದ್ಧ, ವಾಗ್ಯುದ್ಧ ಚತುರ.

ಮಾಳಿಗೆಯ ಮೇಲೆ ಏನೇನೋ ಮಹಾಕ್ರಾಂತಿ; ಇರುಳಿಡೀ
ಸರಸರ, ಭರಭರ, ದಢದಢ;
ಇಲಿಯೊ ಹೆಗ್ಗಣವೊ ಬಾವಲಿಯೊ ಜಿರಳೆಯೊ ಬೆಕ್ಕೊ,
ಇಲ್ಲವೋ ಸತ್ತ ಹತ್ತು ಸಮುಸ್ತರಪಲಾಪ ವಿಪ್ರಲಾಪವೊ ಬಿಕ್ಕೊ,
ಅಶರೀರವಾಣಿಗಳ ರೇಡಿಯೋ ನಿಲ್ದಾಣ
ನನ್ನ ಮನೆಮಾಳಿಗೆಯ ಮೇಲೆ ಉದ್ಘಾಟಿಸಿದ
ಆ ಧುರೀಣನು ಈಗ ಎತ್ತ ನಡೆದ?

ಯಾರವರು ಅಲ್ಲಿ ಕುಳಿತವರು ಮೇಗಡೆ; ಮಹಾನುಭಾವರು;
ನಿದ್ರಾಜಗತ್ತನ್ನು
ಲಯದ ಡಮರುಗ ಹಿಡಿದು ಬಾರಿಸುವರು?
ಟಾರ್ಚಿದ್ದರೆದ್ದು ಬರುತಿದ್ದೆ. ಎದ್ದರು ಹೇಗೊ? ಮಲಗಿದ್ದರೂ ಹೇಗೊ?
ಕತ್ತಲಲ್ಲೇ ಮತ್ತೆ ಮಾನಭಂಗ.
ಮರಳದಿಣ್ಣೆಯ ಸುತ್ತ ಬಡಿವುದುಗ್ರತರಂಗ.
ಭಯಚಕಿತ ಹರಿಣವನು ಬೆಂಬತ್ತಿದನು ಭಿಲ್ಲ.
ಬಾರನೇತಕೆ ನನ್ನ ನಲ್ಲ?

ನೀವು ಯಾರು?
ದಮ್ಮಯ್ಯ ಹೇಳಿರೋ ನೀವು, ಈ ನೀವು, ಕಾಣಿಸದಂಥ, ಕಾಣಿಸದಂತೆ
ಬಂದು ಗೋಣ್ಮುರಿಗೊಂಬ ಈ ಪಂಥ ಹಿಡಿದವರು, ಈ ನೀವು!

ಯಾರು ನೀವು ?
— ಬನ್ನಿರಯ್ಯಾ, ಇರುವಂಥ ಸ್ಥಳ ?
— ಗೊಂದಲಪುರಕ್ಕೆ ಯಾರೆಂದು ಕೇಳಿ ಬಲ್ಲಿರಿ ?
— ಗೊಂದಲಾಸುರೇಶ್ವರ ಮಹಾರಾಜರೆಂದು ಕೇಳಿಬಲ್ಲೆವು.
— ಹಾಗೆಂದುಕೊಳ್ಳಬಹುದು.
— ಕೈಲಾಸದಡಿಕ್ಕೈಯ ರಾವಣೇಶ್ವರ ಕುಲೋದ್ಧಾರ;
ಚಂಡೆ ಮದ್ದಳೆ ಭೇರಿ ದುಂದುಭಿ ತಮ್ಮಟೆ ಶತಗಾರ್ದಭ ಕಂಠತ್ರಾಣ;
ಸಂತೆಸಂತೆಯ ಅಧಿನಾಯಕ;
ಸದ್ದೆಂತೆಂಬರ ಗಂಡ;
ಮೌನಿ ಮುನಿ ಋಷಿ ಧ್ಯಾನಿ ವಿಜ್ಞಾನಿ ಎಂತೆಂಬ ಚಿಂತಕ ಹಂತಕ ಜನ
ಮಿಂಡ;
ಜನ ಜಾತ್ರೆಯ ಜೀವಾಧಾರ;
ಬೀದಿಕೂಗಿನ ಆವಾಹನೆಗೆ ಆರಯ್ದು ಬರುವ ಕಿರುಚುಗಾರರ ಆರಾಧ್ಯ
ದೈವ;
ರೈಲು ಗಿರಣಿ ರೋಡೆಂಜಿನ್ನು ವಿಮಾನ ಬಾಂಬು ಭಾಷಣ ಭಷಣ ಶತಘ್ನಿ
ಸಮಸ್ತ ರಾಜೋಪಚಾರ ಸದಾಸಂಪನ್ನ;
ಗೊಂದಲಾಪುರ ಗೊಂದಲಾಸುರ ಮಹಾರಾಜ,
ಕೋಟಿ ವಿದ್ಯುದ್ದೀಪಸಮ ವೈಷಮ್ಯತೇಜ;
ಭೋ ಪರಾಕ್, ಭೋ ಪರಾಕ್ !

ಬಂದಂಥ ಕಾರ್ಯ ?
— ಬಹಳವುಂಟು
— ಥೈ ಥೈ ಕಥಾ, ಥೈ ಥೈಯ ಥಾ
— ಮುಗಿಸಿಯೇ ಬಿಟ್ಟೆನೆಂದಿದ್ದ ಭಾರ್ಗವರಾಮ,
ಹಾಗೆಯೇ ದಾಶರಥಿ ರಾಮ, ಕೃಷ್ಣ ;
ಹತ್ತು ಅವತಾರ ರಂಗೋಲೆ ಕೆಳಗೇ ತೂರಿ ಸತ್ತು ಬದುಕಿದೆ
ಅಸುರ ದರ್ಪ.

ಸಲ್ಕಿ ಗುದ್ದಲಿ ಕಲ್ಕಿ ನಮ್ಮ ಗೆಸ್ಟಾಪೋವಿನವನೆ ಬೆರಕಿ
ಅವತಾರಿ ಜನಕೆ ತಿಳಿವಳಿಕೆ ಬಹಳಾ ಕಡಿಮೆ, ಕ್ಷಣಭಂಗುರವು ಕೇಕೆ,
ಎತ್ತುವರು ಹುಸಿ ಜಯಪತಾಕೆ;
ಅಂತವಿಲ್ಲದ್ದಯ್ಯ ಭಾಗವತರೇ ನಮ್ಮ ಅಂಶ;
ಅಸುರ ಕುಲಕಿಲ್ಲ ಎಂದೆಂದಿಗೂ ಧ್ವಂಸ.
ದಿನದಿನಕೆ ವರ್ಧಿಷ್ಣು ನಮ್ಮ ಆರಾಮು;
ಇನ್ನೇನು ಮುಂದೆ ಬರುವುದು ನಮ್ಮ ಶ್ರಮಕ್ಕೆಲ್ಲ ಪೂರ್ಣವಿರಾಮ.
ವಿಶ್ವವೆಲ್ಲ ಅಸುರ್ಯವಾಗುವುದೆ ನಮ್ಮ ಗುರಿ.
ನಾವು ಕುಡಿದಿದ್ದ ವಾಸುಕಿ ವಿಷಕ್ಕಿಲ್ಲ ಕೊನೆ;
ಅದಕಿಲ್ಲ ಕಟ್ಟುನಿಟ್ಟು.
ಅದಕೇಕೆ ಗುಟ್ಟು?
ಅಮೃತವೋ? ಅದ ಕೇಳಿ ಇನ್ನೆರಡು ವರ್ಷ ಬಿಟ್ಟು
ಅಷ್ಟರಲ್ಲಿ ಅದೂ ಅದನ್ನು ಕುಡಿದವರೂ ಛಟ್ಟು!
ಅಷ್ಟದಿಕ್ಪಾಲಕರು ನಾಷ್ಟಕಿಲ್ಲದೆ ಈಗ
ಕಟ್ಟುವರು ನಮ್ಮ ಕೈಕಾಲ;
ರಂಭೆ ಊರ್ವಶಿ ಇರಲಿ, ಬೀದಿಬಿಚ್ಚಿಗು ಕೂಡ
ರೊಕ್ಕವಿಲ್ಲದ ದ್ರಾಬೆ ಇಂದ್ರ.
ಹೊಟ್ಟೆಗಿಷ್ಟೂ ಹಿಟ್ಟು ಸಿಗದೇ ಬೃಹಸ್ಪತಿ
ಗೊಂದಲಪುರದ ವಿಶ್ವವಿದ್ಯಾ—ಲಯಕೆ ಕುಲಪತಿ;
ನಾವು ಆಟಂ ಸುಟ್ಟ ದಿನವೆ ಸಮತಾ ಹೊಡೆದು
ಈ ಜಗವನಜ ನಮ್ಮ ಕೈಗೆ ಕೊಟ್ಟ.

ವೈಕುಂಠದಿಂದ ಗೊಂದಲಪುರದ ಗಡಿವರೆಗೆ
ಫಿಶ್‌ಪ್ಲೇಟ ತೆಗೆದು, ಕಂಬಿಯ ಕಿತ್ತು, ಸ್ಟೇಶನ್ನ
ಸುಟ್ಟು ಬಂದಿದ್ದಾರೆ ನಮ್ಮ ಭಟರು;
ವೈಕುಂಠ ಸ್ಟೇಶನ್ನಿನಲ್ಲಿನ ಸೆಲೂನಲ್ಲಿ
ಗೊರಕೆ ಹೊಡೆವನು ವಿಷ್ಣು—ಕೇಳಲಿಲ್ಲವೆ, ಅಹಹ, ಭಾಗವತರೇ!

ಶಿವಭಕ್ತ ನಾನು; ಅವ ಕೊಂಚ ಭೋಳೇ ನೋಡಿ,
ಹೊತ್ತಾರೆ ನಾ ಕೊಟ್ಟ ಹಾಲಿನೊಡನೆ
ಏನನೊ ಬೆರಸಿದ್ದೆ. ಕುಡಿದ ತತ್‌ಕ್ಷಣ ಅನಾಮತ್ತು ಮಲಗಿದ ಧ್ಯಾನ
ಯೋಗದಲ್ಲಿ.

ಈಗ ಎಲ್ಲ ಸಲೀಸು,
ದೇವತೆಗಳೇನು ಬಿಡಿ; ಚಪ್ಪಾಳೆ ತಟ್ಟಿದರೆ
ಹುಳುಹುಪ್ಪಟೆಗಳಂತೆ ಬೀಳುವವರು.
ಮುಖ್ಯ ಬಹಳ ಫಜೀತಿ ಕೊಡುವವರು—
ಈ ನರರು
ಅವರಲ್ಲು ಸೇಕಡಾ ತೊಂಭತ್ತುಮೂರು ಜನ ನಮ್ಮ ಪಕ್ಷದ ಪತ್ರಿಕಾಗಳೇ
ಸಹಿ ಹಾಕಿ ಸೇರಿದವರು;
ಹಾಕಿದ ಗೆರೆಯ ಮೀರಲಾರದವರು;
ಮನ ಮುಚ್ಚಿ ನಮಗೆ ಕೈ ಎತ್ತುವವರು.
ಅವರ ಎದೆಯನು ಕಿತ್ತು ಖಾಲಿ ಬುರುಡೆಯೊಳಿಟ್ಟು ಹೊಲಿದರಷ್ಟೆ ರಿಪೇರಿ;
ಹೆಚ್ಚಿಗಿಲ್ಲ.
ಉಳಿದ ಈ ಸೇಕಡಾ ಏಳರ ಖಳರು ಮಾತ್ರ ಅಷ್ಟಕಿಷ್ಟಕೆ ಮಣಿವ
ಕುಳಗಳಲ್ಲ.
ನಾಸಿಕಾಗ್ರದ ದೃಷ್ಟಿ ಬಿಡುವರಲ್ಲ;
ತರ್ಜನ, ಗರ್ಜನ, ಮಿದುಳ ಮಾರ್ಜನ ಶಿರಚ್ಛೇದನಕ್ಕೂ ತಗ್ಗಿ ನಡೆವರಲ್ಲ;
ಇಲ್ಲಿಂದ ವೈಕುಂಠಪುರಕೆ ಹೋಗುವ ಕಾಲುದಾರಿ ಗುಟ್ಟನು ಬಲ್ಲ
ಭ್ರಷ್ಟ ಜನರು.
ಬಯ್ದರೂ ಇಲ್ಲ, ಆಡಿದರಿಲ್ಲ,
ಕಿವಿಯ ಬಳಿ ಗರ್ನಾಲು ಹೊಡೆದರೂ ಇಲ್ಲವಯ್ಯ.
ಬೀದಿ ಮಕ್ಕಳಿಗೆಲ್ಲ ಚಾ ಕೊಟ್ಟು ಅವರ ಕಡೆ ಛೂ ಬಿಟ್ಟರೂ ಕೂಡ
ಸಗ್ಗಲಿಲ್ಲ.
ಥರ್ಡ್ ಡಿಗ್ರಿ, ಫೋರ್ತ್ ಡಿಗ್ರಿ—ಎಲ್ಲ ಮುಗಿಯಿತು, ಸ್ವಾಮಿ, ಭಾಗವತರೇ.
ವ್ಯಕ್ತಿ ಸ್ವಾತಂತ್ರ್ಯಕ್ಕೆ ನಮ್ಮಲ್ಲಿ ಬಹಳ ಬೆಲೆ; ಅದಕಾಗಿ ಇಷ್ಟು
ಪರದಾಟ, ಇನ್ನು

ಹೊಡಬೇಕಿದೆ ಮನಃಶಾಸ್ತ್ರ ಶಸ್ತ್ರ.
ಒಬ್ಬೊಬ್ಬರನೆ ಹಿಡಿದು ಕುಟ್ಟಿ ತಲೆಯೊಡೆದು,
ಮಿದುಳ ಕಿತ್ತೆಸೆದು ನಾಯಿಗೆ, ಬುರುಡೆ ಹೊಲಿದು
ಕುಂಡೆಮೇಲೊಂದೊದೆತ ಬಿದ್ದರಷ್ಟೇ ಸಾಕು,
ಈ ರಾಜ್ಯ ನಿಷ್ಕಂಟಕ.
ನಾಳೆ ನಮ್ಮೆಲ್ಲ ವಿಜ್ಞಾನಿವೈದ್ಯರಿಗೆ ಹೋಗುವುದಾಜ್ಞೆ :
ಈ ಜಗದಿ ಮಿದುಳೆಂಬುದಿರಲೆ ಕೂಡ;
ಗೊಂದಲಾಸುರ ವಾಕ್ಯ ವೇದವಾಕ್ಯ.
ಹೇಗಿದೇ ಭಾಗವತರೇ?
—ಹ್ಹ ಹ್ಹ ಹ್ಹಾ, ಹಿ ಹ್ಹಿ ಹ್ಹಿ—ಸೊಗಸಾಗಿದೆ ಪರಾಕು!

ಎಂದವನೆ ಡಬಡಬೆಂದಿಳಿದ ಮೆಟ್ಟಲಿನಿಂದ
ನಗರಸಭೆ ಪೀಪಾಯಿ ಹೊಟ್ಟೆ ಘಡವಾ
ಝುಗ್ಗನೊತ್ತಿದ ಸ್ವಿಚ್ಚು; ಕ್ಷಣ; ಕಂಡ ನನ್ನನ್ನು;
ಬಂದು ಕುಳಿತೇ ಬಿಟ್ಟ ಎದೆಯ ಮೇಲೆ
ಸಿಕ್ಕಿಕೊಂಡಿತ್ತುಸಿರು ಕುಂಡಲಿನಿಯಲ್ಲಿ, ನುಡಿ
ಹೂತುಹೋಯಿತು ನಾಭಿಕುಹರದಲ್ಲಿ.
ತಲೆಮೇಲೆ ಗರಗಸವನಿಟ್ಟು ಕೊಯ್ಯುತ್ತಿದ್ದ,
ಗರಗರಾ, ಗರಗರಾ;
ಹರಿಹರಿ, ಹರಹರಾ.

ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂ ಮಮ
ತಸ್ಮಾತ್ ಕಾರುಣ್ಯ ಭಾವೇನ ರಕ್ಷಮಾಂ ಪುರುಷೋತ್ತಮ.

ಸೆಪ್ಟಂಬರ್ ೧೯೫೩.



# ಯುಗಾದಿ



ಹಳೆಮನೆಯ ಮುರುಕುಜಂತಿಯ ಮೇಲೆ ಮುದಿಗೂಬೆ;
(ಹಗಲಿರುಳುಗೊರಕೆ, ಗೊಣಗಾಟ ಕಣೊ, ಪಾಪಿ—ದ್ರಾಬೆ!)
ಮೊಳೆತರೂ ಬೆಳಕು, ಮೂಡಲಲ್ಲಿ ನೆತ್ತರ ಧಾರೆ
ಧುಮುಕಿದರು, ಗಿಡಗಂಟೆ ನರನಾಡಿಯಲ್ಲಿ ಹೊಸ ಉದಯರಾಗೋದ್ವೇಗ
ಕೂ ಎಂದರೂ ಕೂಡ;
ಮಬ್ಬು ಹರಿದರು ಹರಿಯದಿದರ ಸರಪಣಿಕೂಗು, ಸೇಗು.
ಅದೇ ನನೆಹು, ನಿನಗು ಎಲ್ಲರಿಗು ಮೂಗುದಾರ!
ಗಾಳಿಕೂಡ ಭಾರ; ಹೂವು, ಚಿಗುರೆಲೆ, ಮೊಳಕೆ
'ಕುಣಿವೆ ಮಣಕ,'
ಮಣ್ಣಲ್ಲಿ ಕಣ್ಣನ್ನು ಬಿಡುವ ಭತ್ತದ, ಜೋಳರಾಗಿಗೋಧಿಯ ಸಸಿ,
ಏನೊ ಕಸಿವಿಸಿ;
ಆಕಾಶದಲ್ಲಿ ಆಡುವ ಮೋಡ
ದಿಙ್ಮೂಢ;
ಕೆಸರಲ್ಲಿ ಕುಸಿದು ಬಿದ್ದಿದೆ ಮೀನ; ಕಡಲಲ್ಲಿ
ಹೊಗೆಯುಗುಳಿ ಸಾಗುತಿರುವಾಗಬೋಟಿ;
ರೈಲು, ಮೋಟಾರು, ಎತ್ತಿನಗಾಡಿಕೂಡಾ;
ಕಾರ್ಖಾನೆಯಲ್ಲಿ ಉಗಿಯಂತ್ರಚಕ್ರ;
ಗೂಡಲ್ಲಿ ರೆಕ್ಕೆ ಹೊರೆಯದ ಹಕ್ಕಿ; ಅಂಗಳದಿ
ಅಂಬೆಗಾಲಿನ ತುಂಬುನಗೆಯ ಚುಕ್ಕಿ;

ಎಲ್ಲಕ್ಕು ಕಟ್ಟಿದಂತುಸುರು ; ತಾಸಿಗೆ ಒಮ್ಮೆ
ಜುಗು, ಜಗು, ಜುಗು, ಜುಗು,—ಮತ್ತೆ ಸ್ತಬ್ಧ !
ಮಲಗಿದಾತನು ಎದ್ದ, ಮತ್ತೆ ಬಿದ್ದ.
ಸಾಲೆಯಲಿ ಪುಸ್ತಕದ ಮೇಲೆ ಗೂಬೆಯ ನೆರಳು—
ಅತ್ತ ಹಿಮಗಿರಿಗೆ, ಇತ್ತ ರಾಮೇಶ್ವರಕೆ
ಆ ಕೂಗಿನುರುಳು.
ಸುಟ್ಟು ಸಿಡಿಯಲಿ ಸುಟ್ಟ ಗೂಬೆಕಣ್ಣಾಲಿ ;
ಅಟ್ಟಿದನು ಹೊರಗೆ—ಅಪಶಕುನ—ಕೊಟ್ಟಿಗೆಯಾಚೆ,
ಉತ್ತು ಬಿತ್ತಿದ ಗದ್ದೆಯಾಚೆ, ಬಯಲಾಚೆ,
ತೋಪು ತೋಟಗಳಾಚೆ, ಊರಾಚೆ, ನೆಲದ ಆಚೆ.

೨

ಬಾ ಮತ್ತೆ ಮನೆಗೆ ಕೆರೆಯಲ್ಲಿ ಬೆಳ್ಳಗೆ ಮಿಂದು,
ತಾವರೆಯ ಹೂವೆರಡಕಿತ್ತುತಂದು ;
(ಜುಟ್ಟು ಇದ್ದರೆ ಅವನು ಎತ್ತಿಮುಡಿದು)
ತಿನ್ನು ಬೇವಿನ ಸೊಪ್ಪು, ಬೆಲ್ಲ—(ಇದೆಯೇ ಬೆಲ್ಲ ?)
(ಚಾ ಕುಡಿದರೂ ಕೂಡ ಇಲ್ಲ ಭಂಗ)
ಕೊಂಚ ಕುಳಿತುಕೋ ಕೇಳು, ನಿನ್ನ ಪಂಚಾಂಗ :—

ಎಲ್ಲಕಡೆ ಈಗ ಹೊಂಬೆಳಕು ; ಹೊಗೆ ಗಿರಣಿಯಲಿ ;
ಬಸ್ಸು ಹೊರಟಿತು ಕಡುಬಿನಟ್ಟದಟ್ಟ ;
ಮಿಲ್ಲುಗೇಟಿಗೆ ಇರುವೆಸಾಲುಜನ ; ಬಗಲಲ್ಲಿ
ಪುಸ್ತಕದ ಚೀಲದೆಳೆನಗೆಯ ಓಟ.
ಸೂರ್ಯನಿಗು ಏನೊ ದಿಲ್‌ದಾರತನ ; ಅವನ
ಮೋರೆ ತಿವಿದರು ಮೋಡ ನಕ್ಕು ನಡೆದ.
ಇತ್ತ ರಸ್ತೆಯಮೇಲೆ ಬಾಣನಡಿಗೆಯ ಶಪಥ,—

ಹಿರಿಯ ಸಿರಿಬದುಕುಗುರಿ ತೋಟಕ್ಕೆ. ಬಾವಿಯ ತುಂಬ
ನೀರು ; ತೆಂಗಿನ ಮಿಳ್ಳೆ, ಮಾವು, ದಾಳಿಂಬೆ, ನಿಂಬೆ.
ಗದ್ದೆಯಲಿ ಉದ್ದು, ಅಲಸಂದೆ, ಹುರುಳಿ,
ಆಕಾಶದಲ್ಲಿ ಬೆದೆಗೊಂಡ ಆಕಳಹಿಂಡು
ಹಳೆಮನೆಗೆ ಹೊಸರಂಗು ಸುಣ್ಣಗಾರೆ.
ಗುಡಿಸಿ ಸಾರಿಸಿ ರಂಗವಲ್ಲಿ ಹಾಕಿ,
ಲೋಭನ ಹಚ್ಚಿ ;
ಮೂಲೆ ಮೂಲೆಯ ಜೇಡಬಲೆಗೆ ಕಿಚ್ಚನು ಹಚ್ಚಿ, ಕಿಟಕಿ ಬಾಗಿಲನೆಲ್ಲ
ತೆರೆದು ಅಗಲ ;
ಕಣಜದಲಿ ಮದವೆದ್ದು ಕಿಲಕಿಲಿಪ ಕಾಳು ;
ಅಂಗಳದಿ ಕೋಳಿ, ಗುಬ್ಬಚ್ಚಿ, ಕಾಗೆ,
ಹಸುಳೆಗಳ ನಗುವು ಕೇಕೆ.
ಫುಗ್ಗೆ ತುಂಬ ಗಾಳಿ ;—ಹಸುರು, ಅರಸಿನ, ನೀಲಿ—
ಹಾರಿ ಏರಲಿ ಬಾನಮುಟ್ಟ : ತೆಂಗಿನ ಜುಟ್ಟ
ಹಿಡಿದು ಸಿಂಗಾರ ಹೂಗೊನೆಗೆ ಜೋತು ;
ತೆನೆಗಳಲಿ ಕೂತು ಉಯ್ಯಾಲೆಯಾಡಿ ;
ನೀರು ತುಂಬಿದ ಮೋಡದಲ್ಲಿ ಈಸಾಡಿ ;
ತಾರೆತೊಟ್ಟಿಲಿನಲ್ಲಿ ಕೂತು ಕೊಂಚ ;
ಉತ್ಸವದ ಉತ್ಸಾಹತೇರು ಇಳಿಯಲಿ ಕೆಳಗೆ,
ನೆಲಕೆ ;
ತೆಂಗು ಕರ್ಪೂರದಾರತಿ, ಕೆಲಕೆ, ಬಲಕೆ,

೩

ಮೂಗಿತಲೆ ಮೆಟ್ಟಿ ಬಂತು ಯುಗಾದಿ ; ಹಿಡಿ ಹಾದಿ ;
ರಸ್ತೆಧೂಳಿಗೆ ನಿನ್ನ ಬೆವರ ಜಳಕ.
ಆಮೋದಕೀಗ ಪೂರ್ಣವಿರಾಮ ; ಹೊಸವಾಕ್ಯ

ಪುಸ್ತಕದ ಕೊನೆವರೆಗು ಮುಗಿಯಲಾರ.
ಹೊತ್ತು ಹುಟ್ಟುವ ಮೊದಲೆ ಕಟ್ಟು ಸೊಂಟವ, ಕೊರಳ
ಗಂಟೆ ಗಣಗಣ ಮೊಳಗುವೆತ್ತು, ನೊಗನೇಗಿಲು
ಹೊತ್ತು ನಡೆ ಗದ್ದೆಗೆ
ಉಳುರವಿಯ ಸಪ್ತಾಶ್ವರಥವ ಬೆಂಬತ್ತಿ.
ಹೊಡೆದು ರೆಂಟೆಯ ನೆಲವಮಾಡು ಹಸನು.
ಬಿಸಿಲಲ್ಲಿ ಬೀಜ ಒಣಗಲಿ; ಬೇಡವೊಗಲಾಟೆ.
ಇನ್ನು ಇದೆ ಬೇಕಷ್ಟು ಹೊರಲು ಮೂಟೆ.
ತುಟಿಯೆರಡಕೂ ಹಾಕು ಭದ್ರ ಹೊಲಿಗೆ.
ಕಟ್ಟು ನಾಲಗೆಯ ಎದೆತಳದ ನೊಗಕೆ;
ಉಳುವುದೆಷ್ಟೋ ಅಷ್ಟು, ಹೊರುವುದೆಷ್ಟೋ ಅಷ್ಟು,
ನೆಲಕೆ ನಿನ್ನೆದೆ ಸುರಿವುದೆಷ್ಟೋ ಅಷ್ಟು.
ಉಳಿದದ್ದು ಅಡರಿ ಬಂದೀತು ಕಡಲೆದೆಯಿಂದ;
ಇಳಿದೀತು ಬಿಡುಗೆಚ್ಚಲಾಕಾಶದಿಂದ;
ಪ್ರಕೃತಿಧರ್ಮದ ನಿಯತಕಾಮದಿಂದ;
ನೆಲದೆ ಮೊಲೆ ತೊರೆ ಹರಿದ ಪ್ರೇಮದಿಂದ.

ಮಾರ್ಚಿ ೧೯೫೩.



# ದೀಪಾವಳಿ

೧

ಏಲಾ ಇವನ, ಕಿಟಕಿಯೆಲ್ಲ ಮುಚ್ಚಿದ, ಕದವಿಕ್ಕಿದ;
ಕಗ್ಗತ್ತಲಲ್ಲಿ ಕುಕ್ಕರಿಸಿದ;
ಪುಪ್ಪುಸ ಕತ್ತರಿಸುವ ಹೊಗೆ,
ಇಲಿ ಬಾವಲಿ ಕೀಚುನಗೆ
ಮುದ ಮದಗಜನಿನಾದ ಹೊರಗೆ
ಏಳು ತಡಕು, ಹುಡುಕು ಚಿಲಕ.
ಇಡು ಚಿಲಕದ ಮೇಲೆ ಕೈ:
ಮೌನ ಮಸಣಬೂದಿಬಿಟ್ಟು ಕೆಂಗೆಂಡದ ನುಡಿಕಿಡಿ ಬಾ;
ತಟ್ಟು ಕದ, ತಟ್ಟು ಹದ;
ಗೂಟದ ಕರು ಬಾ; ಕೆಚ್ಚಲ ಕುಟ್ಟು ಗುಮ್ಮು;
ಒಸರಿತು ಸೊನೆ; ಹಸುರು ನೆಲ;
ಕೋಟೆಯ ಹೆಬ್ಬಾಗಿಲ ಬಳಿ
‘ ಆನೆ ಬಂತೊಂದಾನೆ ’
ಬೀಗದ ಕೈ?
ನಡೆ ಇಪ್ಪತ್ತಾರು ವರ್ಷ ದೂರ, ದೂರ ತೋಟಕ್ಕೆ.
ಮರಳಿನ ಕಿರು ಆಟದ ಮನೆ; ಸುತ್ತ ಒತ್ತು ಮರಗಿಡಲತೆ;
ಪೇರಳೆಗಿಡದಡಿ ಹೂವಿನ ಹುಡಿರಾಡಿಯ ಕೆದಕು, ಬೆದಕು.
ಹುಡುಕಿ ತರುವ ಭಟ, ಅಧಟ?
ಮರೆತೆಯ ಆ ಅದ್ಭುತ ದೀಪದ ತುಕ್ಕಿನ ಕಕ್ಕುಲಾತಿ?
‘ ಏನಪ್ಪಣೆ, ಏನಪ್ಪಣೆ? ’

೨

ಪಟಾಕಿ, ಚಿನಕುರಳಿ, ಹೂಬಾಣ, ಹೂವಿನ ಕುಂಡ:
ಮರವೆಯಲಿ ನೆನಪು ಥಳಥಳಿಸಿ ಗರಗರ ಗೀರಿ
ಸೆರಭರೆನ್ನುತ್ತಲಿದೆ ಸೊಗದ ನೇಗಿಲ ಮೊನೆ.
ಬೆಳಗುವೆಳಮುಖ ಸುಖದ ಬಿಂದು.
[ ಸುತ್ತಲು ವೃತ್ತವೃತ್ತ ತಿಮಿರಚ್ಛಾಯೆ.
ಹತ್ತು ತೆಂಗಿನ ಮರವ ಹೊತ್ತ ನಡುಗಡ್ಡೆಯಲಿ
ಹೊತ್ತು ನಿಶ್ಚಲ ಅರೆಕ್ಷಣ. ಮಿಂಚು. ಕತ್ತಲ ಕಡಲ
ಉತ್ತು ನಡೆದಿದೆ ಬೆಳಕು ಹಡಗು ದಿಗ್ದೇಶಕ್ಕೆ.
ಸಿಡಿಮದ್ದಿನುಂಡೆ ಪ್ರತಿ ಮನೆಯಲ್ಲಿ, ಲಕ್ಷೋಪಲಕ್ಷ ರೂಪ ವಿಕಾರ,
ಶಬ್ದ ಸಾಕಾರ,
ಮೌನ ಮುಸಣಕೆ ತಾಳಿ ಕಟ್ಟಿ ನಿಂತಪಚಾರ.
ಬೆಳಕು ತಮದ ವಿಕಾರ?
ಹನ್ನೆರಡು ತಿಂಗಳ ತಮಕ್ಕೆ ದೀಪಾವಳಿಯ ಬೆಳಕು ಆಹಾರ?

೩

ದಿನದಿನವು ಲಗ್ಗೆ ನಡೆದಿದೆ ಇವನ ದುರ್ಗಕ್ಕೆ.
ಕದ ತೆರೆಯಲಾರ.
ಹೊರಗೆ ವಿದ್ಯುದ್ದೀಪ ಲಹರಿ ಲಹರಿ ವಿಲಾಪ.
ಅಂತಃಪುರದಿ ಮಾತ್ರ ಅಂಧಕಾರಾಲಾಪ.
ಬೇಡ ಕಣೊ. ಸುಖದ ಕ್ಷಣ ಹಿಡಿದು ಹಾಕಿಸು ಕಟ್ಟು;
ಕಣ್ಣ ಮುಂದೇ ಅದನು ತೂಗು ಹಾಕು.
ಇಂದು ದೀಪಾವಳಿಗೆ ತೆರೆ ಅಗಲ ಬಾಗಿಲ.
ಸೊಂಡಿಲಾಡಿಸಿ ಬರಲಿ ಆನೆ, ಮುದ ಮದ್ದಾನೆ.

ಬೆಳಕು ಬೃಂಹಿತವ ಸಂಹಿತೆ ಕೇಳಿ ತೊಳೆಯಲಿ
ಒಳಮನೆಯ ಕಸವು ಕೊಳೆ, ಜೇಡರ ಬಲೆ.
ಮಸಣದಲಿ ಕ್ಷಣಕಾಲ ಛಟಛಟದ ಬಾಳವೊನೆ.
ಪೇರಳೆಗಿಡದ ಕೆಳಗೆ ಮತ್ತೆ ಕ್ಷಣ ಮರಳ ಮನೆ.
ಎಲ್ಲು ಹೋಗದು ಕಣೋ ನಿನ್ನ ಆ ಕಾಳ ಕೋಣೆ.

ಅಕ್ಟೋಬರ್ ೧೯೫೩.



# ಏನಾದರೂ ಮಾಡುತಿರು ತಮ್ಮ

ಏನಾದರೂ ಮಾಡುತಿರು ತಮ್ಮ;
ನೀ ಸುಮ್ಮನಿರಬಾರದ;
ಆ ಸಸಿಯ ಕೀಳು, ಚಿವುಟೀ ಚಿಗುರ.
ಹೂವ ಕಂಡರೆ ಹಿಸುಕಿ ಬಿಸುಡು: ಹುಲ್ಲೆಲ್ಲೆಲ್ಲಿ
ಅಲ್ಲಲ್ಲಿ ಕೊಳ್ಳಿ ಹಿಡಿದಾಡು ಲಂಕಾದಹನ.
ಮರಿಚಿಟ್ಟೆ, ಗಿಳಿ, ಗುಬ್ಬಿ—ಎಲ್ಲಿ ಕಂಡರೆ ಅಲ್ಲಿ
ಅಟ್ಟು, ಹಿಡಿ, ಕಟ್ಟು; ಕಿತ್ತೆಸೆ ಪಕ್ಕಪುಕ್ಕಗಳ.
ಕಾಡಾನೆ ಹೊಕ್ಕ ನಂದನದಲ್ಲಿ
ಬಿಕ್ಕುತಿದೆ ಇಲ್ಲಿ ಮಲ್ಲಿಗೆ ಅಲ್ಲಿ ಹೊಂಬಾಳೆ.
ಸುತ್ತಲೂ ಗೋಡೆಮೇಲೆಲ್ಲ ಪೌರುಷಬಲದ
ಸ್ವಿಚ್ಚು; ಕಣ್ಣನು ಮುಚ್ಚು:
ಒತ್ತು ಹತ್ತಿಪ್ಪತ್ತನೊಂದೆ ಸಲ; ನೆಲ, ನೀರು, ಆಕಾಶ—
—ಬಂಗಾರವೊಟ್ಟೆಕೋಳಿಯು ಹೊಟ್ಟೆ—ಬಗೆ, ಸೀಳು.
"ಮಾಡು, ಇಲ್ಲವೊ, ಮಡಿ"
ನಿನ್ನ ನಾಲ್ಕೂಕಾಲ ನರ್ತನಕೆ ಪ್ರತಿನಿಮಿಷ
ಏನಾದರೊಂದಕ್ಕೆ ಜಖಂ ಆಗದಿರೆ ನಿನ್ನ
ಅದ್ಭುತ ಪ್ರತಿಭೆಗೇ ಕುಂದು ಕಂಡೆಯ, ತಮ್ಮ.
ವಾನರನ ಮಾಡಮಾಡುತ್ತಲಿ ವಿನಾಯಕನ ಮಾಡಿಬಿಟ್ಟರು ಸರಿಯೆ.
ಯೋಚಿಸುವುದಳೆದು ಸುರಿವುದು ತೂಗಿ ತೂರುವುದು—
ಈ ಎಲ್ಲ ಗತಕಾಲದಾಪತ್ತು;
ಸತ್ತಭಾವದ ಸಾಯಲಾರದ ಪ್ರೇತಸಂಪತ್ತು.

ಕಾಡು ಇದೆ, ಕಡಿ: ಸಿಗಿದು ಕಟ್ಟು ತೋರಣ. ಕೈಲಿ
ಕೊಡಲಿ ಇದೆ, ಮಚ್ಚು, ಗರಗಸ, ಕತ್ತಿ, ಎತ್ತೆತ್ತಿ
ಆಡಿಸಾಡಿಸು—
ಮಾಗಿಯಲ್ಲಿ ಸುತ್ತಲು ಮಬ್ಬು ಕವಿದಾಗ,
ಮೋರೆ ಮೋರೆಯ ಮಧ್ಯೆ ಒಂದೆರಡು ಗೆರೆ ಮಂಜುಗೋಡೆ ನೆಗೆದೆದ್ದಾಗ.
ದಾರಿ ಕಣ್ಣೆದುರು ಕವಲೊಡೆದು ನಿಡುಸುಯ್ದಾಗ,
ಎರಡು ಗಿರಿಶಿಖರ ತಲೆಯೆತ್ತಿ ಮಾರ್ಮಲೆದಾಗ,
ಮರಮುದ ಮೇಲೆ ಮೋಹಿನಿ ಕಣ್ಣು ಹೊಡೆದಾಗ—
ಚಿಂತೆಯೇ, ಧರ್ಮಸಂಕಟವೆ?
ಛೀ, ತೆಗೆ; ನೀನು ಸರಳ—
ಅದೆ ನಿನ್ನ ಹೆಗ್ಗಳಿಕೆ;
ಕಣ್ಣಪಟ್ಟಿಯ ಕುದುರೆನೋಟ ನಿನ್ನಗ್ಗಳಿಕೆ.
ಕೈಗೇನೆ ಸಿಕ್ಕಿದರು ತಿನ್ನು;
ಕಣ್ಣಿಗೆ ಏನು ಬಿದ್ದರೂ ಅದ ಹಿಡಿದು ಹಿಂಡು;
ಕಾಲಿಗೆ ಏನು ತೊಡರಿದರು ಅದ ಹಿಡಿದು ಕತ್ತರಿಸು.
ಈ ಅಬಲೆ
'ಮಲಗಿರುವ ತಾಯಿ ಪೃಥಿವೀ'
ಸುಸ್ತಾಗಿ ಇಲ್ಲಿ ಮಲಗಿದ್ದಾಳೆ; ಮುಗಿಲಕಡೆ
ಕಣ್ಣನೆತ್ತಿದ್ದಾಳೆ.
ಅವಳ ಅಂಗಾಂಗದಲಿ
ಒಂದಿಷ್ಟು ರಕ್ತ ಜಿನಗುವ ತನಕ ಅದ ಕಚ್ಚಿ ಹೀರು.
ಮಾಂಸವಿಲ್ಲವೆ?
ಮಾಂಸ?
ಮೂಳೆನರ ಮಜ್ಜೆ ತೊಗಲಷ್ಟಾದರೂ ಇಹುದೊ ಅಲ್ಲೊ!
ಅಹಹಾ, ಗಂಡು ನೀ ಕಣೋ!

ಆ ಅಲ್ಲಿ ಇಹುದು ಜೀವದ ಬಾವಿ.
ಕಟ್ಟು ಯಾತವ—ಯಾತಕಾದರೇನಂತೆ ಅದು—

ಮೊಗೆ ನೀರ.
ಬಾವಿತಳ ತೊಳಸು ಹನಿಬಸಿಯ ಕೊನೆ ಸಿಗುವನಕ.
ಪಾತಾಳಗರುಡಿ ಇಳಿದಿಳಿದು ತಡಕಲಿ ತಳವ.
ಅಣುವನೊಡೆ, ಮಹತ್ತನು ಪಡೆ.
ಬ್ರಹ್ಮಾಂಡಕ್ಕೆ ತೊಟ್ಟುಬಿಡು ಬ್ರಹ್ಮಾಸ್ತ್ರ.
ವಿಜಯೀಭವ.

ಏನಾದರೂ ಮಾಡುತಿರು ತಮ್ಮ; ಸುಮ್ಮನೆ ಕೂತು
ನೆಲಕೆ ನೀ ಬರಿಭಾರವಾಗಬೇಡವೊ; ನೆಲದ
ಭಾರ ಕಳೆಯಲು ಹೀಗೆ ಮಾಡು ನೀ ಸರಿ, ಸಹಜ.

ಏಪ್ರೆಲ್ ೧೯೫೩.



# ನಂದನ

## ೧

ನೀನೂ ಬಂದೆಯು, ಬಾ, ಮಗು ನಂದನ:
'ನಮೋ ಅರ್ಭಕೇಭ್ಯಃ'
ಉರಿವ ಖಾಂಡವದ ಕೊಲೆ ಕೊನೆಯಂಚಲಿ ಕೊನೆಯೇರುವ ಕಂದ,
ಆಟಂಮುಸಣದಿ ಮನೆಯಕಟ್ಟಿ ಅದಬಾಳ್ವೆನೆಂಬ ಅಂಧ,
ಹುಟ್ಟಿದ ಕೂಡಲೆ ಹಾರಿ ಸೂರ್ಯನನೆ ಹಾರಿದ ಹನೂಮಂತ!
ಮುಗುಳ, ತಳಿರ, ಕುಡಿ ಹಸುರ ಕರುಳ ತೊದಲುಲಿಯ ನಮನ ನಿನಗೆ;
ಗೆದ್ದಲುಮನೆ ಮನಮನದಭಿನಂದನ;
ಸುಟ್ಟ ಗುರಿಯ ಗೋಪುರದಭಿವಾದನ;
ಬಿದ್ದ ಪಟದ ಎದ್ದೆದ್ದು ಬಿದ್ದ ಬೇಗುದಿಯ ಬಾಷ್ಪಸೇಕ.
ಚರಂಡಿತೀರದಿ ಕೂಳ ಹೆಕ್ಕುವೆಡಗೈಸಲಾಮು ತಕ್ಕೋ;
ಬಗ್ಗಿದವನ ಬೆನ್ನಿರಿವ ಕೈಯ ತೊಳೆವಯ್ಯ ಕೈಗೆ ಸಿಕ್ಕೋ.
ಸಪ್ತಲೋಕಗಳ ಹುತ್ತಹುತ್ತದೊಳ ಫಣಾರತ್ನ ಚೀಲ
ಹೊತ್ತು ತಲೆಯ ಮೇಲಂಬೆಗಾಲ ಲೀಲೆಯಲಿ ಬರುವ ಬಾಲ,
ರೆಕ್ಕೆ ಮುಡಚಿ ರಣಹದ್ದು, ಡೇಗೆ ಗೂಡಲ್ಲಿ ಸಾವ ಹೊತ್ತೋ?
ಹೇಳು ಅಣ್ಣ, ಅಥವಾ ಜಲಬುದ್ಬುದದಳ್ಳೆ ಹೊಯ್ದು ಕುತ್ತೋ?
ಒಡೆದು ಜಹಜು ಜಲಮಧ್ಯ ಮರಳಲಿ ಖಲಾಸಿ ಕೈಯ ಮುಗಿವ;
ತಂದೆಯೇನು ಹೊಸಹಡಗನೊಂದ ನೀ ಬಂದ ರೇವಿನಿಂದ?

೨

ನೀನೂ ಬಂದೆಯ, ಬಾ, ಮಗು ನಂದನ!
ಪ್ರಭವ, ವಿಭವ, ಶುಕ್ಲ . . . . .
ಹೀಗೆ ಬಂದರು; ಭಾಗೀರಥಿನಗೆ ತರಂಗ ಬಡಿಯಿತು ಬಂಡೆಗಳ;
ತೊದಲಿನಲ್ಲಿ ಮಡಲಿಟ್ಟು ಬೆಳೆಯಿತು ಆಶೆಬಳ್ಳಿ, ಹೊಸಚಿಗುರುದಳ.
ಗೆಜ್ಜೆಪೈಜಣ ಚೈತ್ರವನೊರೆಯಿತು;
ಉಡ್ಯಾಣದ ಕಿರುಗಂಟೆ ಉಲಿಯಿತು ನವೋದಯದ ಕಗ್ಗಂಟುಭಲ

ಹೇಗೋ ಬಂದರು, ಹೇಗೋ ಹೋದರು—
ಸುಗ್ಗಿ ಸೊರಗಿ, ಬಿರುಬಿಸಿಲು ಸುಗಿದು, ಮಳೆಗಾಳಿ ಬೀಸಿ ಮೊಗೆದು,
ಶರತ್ಕಾಲದಾಹ್ಲಾದ ತಗ್ಗಿ ಚಳಿ ನುಗ್ಗಿ ಕುಗ್ಗಿ ಬಾಳು
ಆಗಿ ಬರಿದು, ಬೊಂಬುಗಳ ಮೇಲೆ ಜಂಬೂಸವಾರಿ ನಡಸಿ,—
ಹೂವು ಬಾಡಿ, ತರಗೆಲೆಗಳುದುರಿ, ಬೋಳಾಗಿ ಬಳ್ಳಿ ಬಳ್ಳಿ
ಈಚೆ ಕಂದರಕ್ಕೆ ಬಿದ್ದು ಕಂತಿದರು ಒಬ್ಬರೊಬ್ಬರಾಗಿ.
ಹಾಗೇ ಬಂದಿಹೆ, ಕಂದ;
ಹಾಗೆಯೇ ಹೋಗುವಣ್ಣ ನೀನು.
ಇಲ್ಲೇ ಇಲ್ಲೇ ಇದ್ದು ಕೊಳೆವ ಈ ನಮಗೆ ದಾರಿ ಏನು?

೩

ಬಂದೆಯ, ಬಾ, ಅಂಬೆಗಾಲ ಅಂಚೆ!
ಆಚೆದಡದಿ ಹೊಸತೇನು ಸಮಾಚಾರ?
ಪ್ರತಿಫಾಲ್ಗುನ ನಾವೀಚೆಗೆ ಮುಂಡಾಮೋಚಿ ಕುಳಿತ ವೇಳೆ
ಅಚೆದಡದ ನಗು, ಕೇಕೆ ನೂಕುವುದೆ ಕರಾಳ ತೆರೆಗಳ ಮೇಲೆ
ನಿನ್ನಂಥವರನು?
ಮತ್ತೆ ಅಂಥ ದಡ ನಿನಗೆ ದೊರಕವಯ್ಯೋ;

ಅದಕೇ ನಮ್ಮವ ನೀನು:
ಒಂದೆ ವತ್ಸರದ ನಿನ್ನ ಯಾತ್ರೆ
ಹೇಗೋ ಮುಗಿವುದು ಮುಗ್ಧ;
ನೀ ಯುಗಾದಿಯಲಿ ನೆಡುವ ಕಿಡಿಯು
ವರ್ಷವಿಡೀ ಹೊಗೆಯಾಡಿ ಆರುವುದು.
ಮತ್ತೆ ಬಂದೆ ಬಹರು
ವಿಜಯಜರೊ ಮನ್ಮಥರೋ ಇದೇ ಪರಿ;
ಇದೇ ಆಟ, ನೋಟ.
ಮುದ್ದು ಕಂದಗಳು ಬಾಡಿ ಬೀಳುವುದ ಕಂಡು ಕೊಳಿವುದಷ್ಟೇ.
ಸೋಸಿ ಸೋಸಿ ಕೊನೆಗುಳಿವುದು ನಮಗೆ ಬರೀ ತಳದ ಗಷ್ಟೇ!



ಜನವರಿ, ೧೯೫೧



# ಕೃಷ್ಣನ ಕೊಳಲು

೧

ನಿಂತೆ ರುಗ್ಣಗಿರಿಯ ಭಗ್ನಶಿಖರದ ಮೆದೆಕೂದಲ ಕೊಳೆ
ಕೋಟೆ ಕೆಳಗೆ.
ಬಿದ್ದ ಹಲ್ಲ ಬಚ್ಚ ಬಾಯಿ ಲೊಚಲೊಚ ಲಟ್ಟಣಿಸಿದಂತೆ
ಆಕಳಿಸುವ ಕಿರಲುಚಿಲಕ
ಅರವತ್ತರ ಕಚ್ಚೆಹರಕುತನವ ತೆವಲು ದುಡುಕಿದಂತೆ
ಹೆಬ್ಬಾಗಿಲಿನರೆ ತೆರೆದ ಬಾಯಿ.
ಕಮರುತೇಗುಬಿಟ್ಟು ಮುಖವ ಮುದ್ರಿಸಿದೊಲು ಕೊತ್ತಳಗಳು ;
ಸುಕ್ಕುಗೋಡೆ ;
ಗಾರೆಬಿದ್ದು ಗೋಗರೆಯುವ ಇಟ್ಟಿಗೆ.
ಕುಸಿದ ಕಂಭ.
ಬಾಗಿದ ಜೆನ್ನೆಲುಬು ಜಂತಿ, ತೊಲೆ, ರೀಪು.
ಲೋಳೆಜೊಲ್ಲು ಚೆಲ್ಲಿದವೊಲು ಅಲ್ಲಿ ಇಲ್ಲಿ ಕೊಳೆವನೀರು.
ಬಿರುಕುಗೋಡೆಸಂದಿಸಂದಿ ಜೇಡನ ಬಲೆ—ಪುರಾಕೃತದ
ಪೊರೆ, ಪೊರೆ, ಪೊರೆ—ಹೇರಿದೆ.
ಬಾಗಿಲ ಬಳಿ ಕೈದೊಣ್ಣೆಗೆ ಸಿಂಹಮುಖದ ಭೀಕರ ಹೊರೆ;
‘ ದೊಂಗಲುನ್ನಾರು ಜಾಗ್ರತ ! ’
ಬಾವಲಿ ಹಳೆಯುಚ್ಚೆಹಿಕ್ಕೆ ಗಿಜಿಗಿಜಿಗಿಜಿ ಚಾವಡಿಯಲಿ
ಗೋಪಿಕೆಯರ ಹಳಸುನೆಳಲ ಮೇಲೆ ನೊಣೆದು ಮುಸುರುತ್ತಿವೆ
ಮತಿದಾಸ್ಯದ, ಮತಹಾಸ್ಯದ ಸೊಣ, ನುಸಿ.

ಬಾಲವಾಡಿಸುತ್ತ ನಾಯಿ
ಸತ್ತ ಗರುಡಪಕ್ಷಿರೆಕ್ಕೆ ಕಿತ್ತಾಡಿಸುತಿರೆ ಬಾಯಿ.

ಕಮಟುಸುರಿವ ಸುಪ್ಪತ್ತಿಗೆ:
ಮೇಲೆ, ಸುತ್ತ ಗೆದ್ದಲು.
ಬುಗುಟುಹಿಡಿದ ಮಂದಾಸದಲ್ಲಿ ಗೂಗೆ ಘೂಕ್ಕೆಂದಿತು;
ಸುತ್ತಮುತ್ತ ಮರಿಗಿಳಿಗಳ, ಕೋಗಿಲೆಗಳ ರೆಕ್ಕೆ, ಪುಕ್ಕ.
ಮೂಲೆಯಲ್ಲಿ ಲೊಚಗುಟ್ಟುವ ಹಾಳುಹಲ್ಲಿ.
ಬೂದಿಸೆರಗ ಮೋರೆಗೆಳೆದ ವಿಧವೆಬೆಂಕಿ ಮೂಲೆಯಲ್ಲಿ.
ಹತಾಶ ಕೃತಕಕಾಮಾಗ್ನಿಯ ಜ್ವಾಲೆ ಕೊಂಚ ಬುಗ, ಬುಗ.
ಇಟ್ಟಿದೆ ಬಿಸಿಬಿಸಿ ಚಕ್ಕುಲಿ, ಕೋಡುಬಳೆ, ತಂಬಿಟ್ಟು,
ಹತ್ತು ತರದ ಉಂಡೆ, ಬಾಳೆಹಣ್ಣು, ಹಣ್ಣು ಸೀಬೆ ಹೋಳು.
ಒಡೆದ ಕೊಳಲ ಮೇಲೆ ಗಿರಣಿ ಸೈರನ್ನು ಐಶಾಚಪಾದ.
ನೆಗಡಿಬೀಗ ಜಡಿದ ಕಂಠದಿಂದ ಹೇಗೋ ಹಾಗೆ ಗಾಳಿ
ಕ್ಯಾಕರಿಸಿತು ಸುತ್ತಲೂ.

ಹೊರತೋಟದ ದಾರಿ ತುಂಬ ಸುಟ್ಟ ಹುಲ್ಲು ಧೂಳು ತರಗು.
ಎರಡೂ ಕಡೆ ಕಟ್ಟಿಗೆ ಮರ.
ನೀರಿಲ್ಲದ ಅರವಟ್ಟಿಗೆ.
ಹೂವಿನ ಹುಡಿರಾಡಿ ಕುಕ್ಕಿ ಕಾಗೆ ತಾನೆ ಕೋಗಿಲೆವೊಲು ಅನ್ನುತಿದೆ
ಆಗೀಗ—
'ಕಾಕೂ, ಕಾಕೂ, ಕೂಕಾ'

ತಂಗೊಳತಳ ಬರಿದು ಬರದ ಗದ್ದೆಯಂತೆ ಕಿಸಿಯುತ್ತಿದೆ,
ಬಾಯ್ಬಿಟ್ಟಿದೆ ಮೋಡಕೆ.
ಒಣಗಿದ ತಾವರೆದಂಟಿನ ಸುತ್ತ ಸತ್ತ ಮಧುಪಾಳಿಯ
ರೆಕ್ಕೆ ಮಣ್ಣು ತಿಸತಿದೆ.
ಅದೋ ಅಲ್ಲಿ ಅರಸಂಚೆಯ ಕೊಕ್ಕು, ಪುಕ್ಕ; ಅದೇ ಕಾಲು.

ಬೃಂದಾವನದ ಟ್ರೈ ಕಂಡು ನಡುಗುವುದೇ ಕೈಕಾಲು ?
ತಡೆ.
ಅಲ್ಲಿನ ಆ ಬೋಳು ಬಳ್ಳಿಮನೆ ಕಂಕಾಲದ ಪಾಚಿಗಲ್ಲ ಮೇಲೆ
ಹೋಗಿ ಕುಳಿತುಕೊ.
ಮುಚ್ಚು ಕಣ್ಣ, ತೆರೆಯ ಬೇಡ.

೨

ಶ್ಯಾಮತಮಾಲಚ್ಛಾಯೆ ;
ಪೈಚಾಚಿದೆ ಚಂದ್ರಿಕಾಮಾಯೆ.
ಮಸುಕುತಾರೆ ತಿಂಗಳಲ್ಲಿ ಬೀಯೆ,
ಕಸಕುಗಾಳಿ ಕಸಿವಿಸಿಗೆದೆ ಸೀಯೆ,
ಸುತ್ತುವ, ಮುತ್ತುವ, ಎಲೆಸೆರಗೆತ್ತುವ
ಸಮೀರ ಸಂತತ ಹಾಯೆ;
ತಾರೆ ತೀರದಲಿ ಮರಿಮುರಿಮೋಡ
ಬೆಳಕುಚಿಮುಕಿನಲಿ ತೋಯೆ ;
ದಡದ ಕದಕೆ ಕೈಹಚ್ಚಿ ಯಮುನೆ ನಿಶ್ಯಬ್ದ ನಿಂತು ಕಾಯೆ;
ಬೆಳ್ಳಿಮುಲಾಮನು ತೊಟ್ಟು ಮರವುಗಿಡ ಬಳ್ಳಿ ಕುಣಿದು ತಲೆಯೊಲೆಯೆ,
ದಿಗಂತದಾಚೆಗು ಸ್ವಪ್ನಮಾದಕಜ್ವಾಲೆಜಾಲ ಅಲೆಯೆ ;
ತುಟಿಯ ಕಚ್ಚಿ ಮಾಧವಿ ನಸುಸುಯ್ಯೆ,
ಕಣ್ಣ ಮಿಟುಕಿಸಿತು ತಾರೆ.

ದಟ್ಟನೆಳಲ ಆ ಕುಂಜ ಖಂಜರಿಗೆ
ತಾಗಿತಾರ ಬೆರಳು ?
ಹಲ್ಲು ನಿಮಿರಿ ಎಳಗಾಳಿ ತತ್ತರಿಸಿ
ಬಾಸಿಗೆಲ್ಲ ಬೆರಗು.
ಯಾರ ನಿಟ್ಟುಸಿರ ಬೇಗೆ ಹಬ್ಬುತಿದೆ ವನವನ ಕುಂಜ, ನಿಕುಂಜ ?

ಯಾರ ಅಂದುಗೆಯು, ಸೊಂಟಗಂಟೆಗಳ ಕಿಣಿ ಕಿಣಿ ಗಣಗಣ ನಾದ ?
ಬೆಳುದಿಂಗಳ ಮಂಗಳ ರಂಗಸ್ಥಳದಲ್ಲಿ ಬಳೆಗಳುಲುಹುಃ
ಧಿಮಿಧಿಮಿತದ್ಧಿಮಿ ತಾಳ ಕುಡಿಯುತಿದೆ, ಅಗೋ ರಂಗನೊಲವು !

೩

ಅಯ್ಯೋ ನಾಟಿತು ಬಾಣ ; ಗುಹೆಗುಹೆಗಳನು ಬಗೆದು
ಕುಂಜಕುಂಜಗಳಲ್ಲಿ ಹೊಕ್ಕು ಸೊರಟು ;
ಮರಮರಕೆ ತಾಗಿ, ತಂಗೊಳದಲ್ಲಿ ಮುಳುಗಿ, ಹೂ
ಹೂವುಗಳ ಕಂಪಿನಲಿ ಬೀಗಿ ಮಾಗಿ

ಬಂತು ಬಿದುರಿನ ಬಿರುಕಿನಿಂದ ಅಲೆಅಲೆ. ತಂತಿ
ಮಿಂಚು ತಾಗಿತು ನರವ, ರಕ್ತಕಣವ.
ಪಾತಾಳಗರುಡಿ ಸರಸರನಿಳಿದು ತಳತಳವ
ತಾಗಿ ಸೋಸಿತು ಸಹಜಪಂಕಪುರವ.

ಬೀಸಿ ಬಂದಿತು ಪ್ರಳಯವಾತ ; ಸುಯ್‌ಸುಯ್ ಎಂದು
ಸೂಸಿ ಬಂದಿತು ಮಲಯಗಂಧಾನಿಲ.
ತೊಳಲಿ ಬಂದಿತು ಹಕ್ಕಿಮರಿ ಪುಕ್ಕಗರಿಗೆದರಿ,
ಮರಿಮೋಡ ಕಣ್ಣುಮುಚ್ಚಾಲೆಯಾಡಿ.

ಕೊಲುವ ದನಿ, ಕೊಂದು ಬದುಕಿಸುವ ದನಿ ; ಸಾವೆನೆಂಬಾಸೆ
ಕೆರಳಿಸುವ ಜೀವೋತ್ತರ ದನಿ ;

ಆಗಸ್ಟ್ ೧೯೫೨.



# ಹಿನ್ನುಡಿ.

---

ಶ್ರೀಮಾನ್ ಗೋಪಾಲಕೃಷ್ಣ ಅಡಿಗರ ಮೊದಲ ಕವನಸಂಗ್ರಹ ೧೯೪೬ರಲ್ಲಿ ಪ್ರಕಟವಾಯಿತು. ಅದಕ್ಕೆ ಮುನ್ನುಡಿಯನ್ನು ಬರೆಯುತ್ತಾ ಶ್ರೀಮಾನ್ ಬೇಂದ್ರೆಯವರು ಈ ಅಭಿಪ್ರಾಯವನ್ನು ವ್ಯಕ್ತಪಡಿಸಿದರು: "ನಾನು ಕವಿತೆಗಳನ್ನು ಬರೆಯಲು ಆರಂಭಿಸಿದಾಗ ಇದ್ದ ಶೈಲಿಯ ಪ್ರಾಯೋಗಿಕತೆ ಇಂದಿನ ಕನ್ನಡದಲ್ಲಿ ಅಷ್ಟು ಮಟ್ಟಿಗೆ ಇಲ್ಲ. ಒಂದು ಬಗೆಯ ಸಿದ್ಧ ಶೈಲಿಯಿಂದ ನವಕವಿಗಳು ಹೊರಡುತ್ತಾರೆ. . . . ಆದರೆ ನಮಗೆ ಆ ಕಾಲಕ್ಕೆ ಇದ್ದ ನಾವೀನ್ಯದ ಅನುಕೂಲ ಈಗಿನವರಿಗಿಲ್ಲ." ಈ ಸಂಗ್ರಹದಲ್ಲಿಯೂ ಇದರ ಮುಂದಿನವದರಲ್ಲಿಯೂ ಅಡಿಗರು ಶಂಕರಭಟ್ಟರು ಬೇಂದ್ರೆಯವರು ನರಸಿಂಹಾಚಾರ್ಯರು ಮುಂತಾದ ಕವಿಗಳ ಮಾರ್ಗವನ್ನು ಬಹುಮಟ್ಟಿಗೆ ಅನುಸರಿಸಿದರು, 'ಮೋಹನಮುರಳಿ', 'ಅತಿಥಿಗಳು' ಮುಂತಾದ ಕೆಲವು ಉತ್ತಮ ಕೃತಿಗಳನ್ನು ರಚಿಸಿದರು. ಕಳೆದ ವರ್ಷ ಪ್ರಕಟವಾದ ಅವರ ಮೂರನೆ ಕವನಸಂಗ್ರಹದಲ್ಲಿ ಅವರು ತಮ್ಮ ವೈಶಿಷ್ಟ್ಯಕ್ಕನುಗುಣವಾದ ನವ್ಯಮಾರ್ಗವನ್ನು ಹುಡುಕಲು ಪ್ರಯೋಗಗಳನ್ನು ನಡೆಸಿದರು. 'ನನ್ನ ಅವತಾರ' ಎಂಬ ಕವನ ಯಶಸ್ವಿಯಾಯಿತು. ಈಗ ಹೊರಬೀಳುತ್ತಿರುವ ಇವರ ನಾಲ್ಕನೆ ಕವನಸಂಗ್ರಹದಲ್ಲಿ ಎಲ್ಲವೂ ನವ್ಯಮಾರ್ಗದಲ್ಲಿ ಬರೆದವು. 'ನಂದನ' 'ದೀಪಾವಳಿ' 'ಯುಗಾದಿ' ಮುಂತಾದ ಸಣ್ಣ ಸುಂದರ ಕವನಗಳೂ 'ಹಿಮಗಿರಿಯ ಕಂದರ' ಎಂಬ ಸಂಪೂರ್ಣ ದೀರ್ಘಕವನವೂ 'ಗೊಂದಲಪುರ' ಎಂಬ ಅಸಂಪುರ್ಣ ದೀರ್ಘಕವನವೂ ಇರುವ ಈ ಸಂಗ್ರಹಕ್ಕೆ ಹಿನ್ನುಡಿ ಬರೆಯುವುದು ಹೆಮ್ಮೆಯ ವಿಷಯವೇಸರಿ.

'ನಾವೀನ್ಯದ ಅನುಕೂಲ'ವನ್ನು ಕುರಿತು ವಿಚಾರಮಾಡುವಾಗ ಸಾಹಿತ್ಯದ ಹೃದಯವನ್ನೇ ನಾವು ಅರಸುತ್ತೇವೆ. ಒಂದೇ 'ಸಿದ್ಧಶೈಲಿ' ಯಲ್ಲಿ ಬಹುಕಾಲ ಉತ್ತಮಕವಿತೆಗಳನ್ನು ಬರೆಯಲಾಗುವುದಿಲ್ಲ. ಮತ್ತೆ ಮತ್ತೆ ಪ್ರಯೋಗಿಸಿದ ಪದ ಬಣ್ಣಗೆಡುತ್ತದೆ, ಮೊಂಡಾಗುತ್ತದೆ. ಅತಿ ಯಾಗಿ ಬಳಸಿದ ಛಂದೋರೂಪ ಮನಸ್ಸಿನ ಎಚ್ಚರವನ್ನು ಕಡಿಮೆ ಮಾಡುತ್ತದೆ. ಬೇಂದ್ರೆಯವರ ಮೊದಲ ಷಟ್ಪದಿಗಳನ್ನು ಓದಿದರೆ ಅವರ ಪ್ರತಿಭೆಗೆ ಬೇಡಿಗಳನ್ನು ಹಾಕಿದಂತೆ ಭಾಸವಾಗುತ್ತದೆ. ಅಲ್ಲದೆ ಒಂದು ಕಾಲಮಾನದ ಪ್ರಪಂಚಪರಿಸ್ಥಿತಿ ಹೊಂದುವಂತೆ ಒಂದು ಛಂದೋರೂಪ ನಿರ್ಮಿತವಾಗಿರುತ್ತದೆ. ಇನ್ನೊಂದು ಕಾಲಮಾನದ ಭಿನ್ನಪರಿಸ್ಥಿತಿಯನ್ನು ಚಿತ್ರಿಸಲು ಬೇರೆಯೇ ಮಾರ್ಗ ಕಲ್ಪಿತವಾಗಬೇಕು. ಆದ್ದರಿಂದಲೇ ಹೊಸವಿಷಯಕ್ಕೆ ಹಳೆಯಶೈಲಿ ಅಸಹಜವಾಗುವುದು. ಇಪ್ಪತ್ತನೆ ಶತ ಮಾನದಲ್ಲಿ ಕಾಲ-ಮೊದಲು ಓಡುತ್ತಿದ್ದುದು ಈಗ-ಹಾರತೊಡಗಿದೆ. ಇಪ್ಪತ್ತು ವರ್ಷಗಳಿಗೇ ಪರಿಸ್ಥಿತಿ ಪೂರ್ಣವಾಗಿ ಬದಲಾಗುತ್ತಿದೆ. ಹಿಂದೆ ಒಂದು ಶತಮಾನವಾದರೂ ಉಪಯೋಗಿಸಬಹುದಾದ ಒಂದು ಶೈಲಿ ಈಗ ಇಪ್ಪತ್ತು ವರ್ಷಗಳಿಗೇ ಮಾಸುತ್ತದೆ. ಇನ್ನೊಂದು ಮಾತೆಂದರೆ ಕವಿಯ ವ್ಯಕ್ತಿತ್ವ ಅವನ ವಯಸ್ಸಿನೊಡನೆ ಬೆಳೆಯುತ್ತಾ ಹೋಗುವುದ ರಿಂದ ಅವನ ಶೈಲಿಯೂ ಕ್ರಮೇಣ ವ್ಯತ್ಯಾಸವಾಗುತ್ತದೆ. ಹೀಗಾಗದೆ ತರುಣದಲ್ಲಿ ಬಳಸಿದ ವಿಷಯಗಳನ್ನೇ ಶೈಲಿಯನ್ನೇ ಪರಿಣತವಯಸ್ಸಿ ನಲ್ಲಿಯೂ ಬಳಸುತ್ತಿದ್ದರೆ ಜನರು ತರುಣದ ಕವನಗಳನ್ನು ಮಾತ್ರ ಇಟ್ಟುಕೊಂಡು ಮಿಕ್ಕನನ್ನು ತೊರೆದುಬಿಡುತ್ತಾರೆ. ಹೊಸ ಪರಿಸ್ಥಿತಿಯ ಹೊಸ "ಅಬೋಧ ಭಾವ ಅಂಭೋದಗಳ ವಿದ್ಯುದಾಸೆಯ ಮುಗ್ಧ ನಾಲಿಗೆ ಹೊಸಪದಗಳ ಹೊಸ ಛಂದೋಮಾರ್ಗದ ಕಾವ್ಯವನ್ನು ಕಲಿಸ ಬಲ್ಲ ಕವಿಗೆ ಪ್ರಪಂಚ ಕಿವಿಗೊಟ್ಟು ಕೃತಜ್ಞತೆಯಿಂದ ಕೇಳುತ್ತದೆ. ನಿಜ ವಾದ ಕವಿಗೆ ಅವನದೇ ಆದ ಹಾಡಿನ ಧಾಟಿಯಿರುತ್ತದೆ. ಇವನ್ನು ಅನು ಕರಣ ಮಾಡುವ ಕವಿನಾಮರು ಸುಮ್ಮನಿರುವುದು ಮೇಲು. ಏಕೆಂದರೆ ಅವರು ಏನೇ ಬರೆದರೂ ಮೂಲಕವಿಯ ನೆರಳು ಅದರ ಮೇಲೆ ಬೀಳದಿರದು ಬೇಂದ್ರೆಯವರ ಜಾನಪದ ಗೀತೆಗಳ ಧಾಟಿಯಲ್ಲಿ ಕೆಲವರು ಬರೆಯುತ್ತಿರು

ವುದು ಈ ದೃಷ್ಟಿಯಿಂದ ಶೋಚನೀಯ. ಒಮ್ಮೊಮ್ಮೆ ಸಣ್ಣ ನೈಜಕವಿಯ ವಿಶಿಷ್ಟವಾದ ಮಾರ್ಗವನ್ನು ಒಬ್ಬ ಹಿರಿಯಕವಿ ಉಪಯೋಗಿಸಿಕೊಂಡು ಅದನ್ನು ತನ್ನದನ್ನಾಗಿ ಮಾಡಿಕೊಳ್ಳಬಲ್ಲ. ಪುಟ್ಟಪ್ಪನವರ ಸರಳರಗಳೆಯನ್ನು ಇಲ್ಲಿ ಉದಾಹರಿಸಬಹುದು. ಈ ವಿಷಯದಲ್ಲಿ ಎಲಿಯಟ್‌ರ ಈ ಮಾತು ಪೂರ್ಣವಾಗಿ ಸತ್ಯವಾದುದು: "Each venture is a new beginning, a raid on the inarticulate."

೧೯೨೦ ರ ಸುಮಾರಿನಲ್ಲಿ ಆರಂಭವಾದ ಕಾವ್ಯ ಈಗ ಮಾಗುತ್ತಿದೆ. ನವಕವಿಗಳಿಗೆ ಆ ಶೈಲಿ ಅಸಹಜವಾಗುತ್ತಿದೆ. ಈ ಹತ್ತು ವರ್ಷಗಳಲ್ಲಿ ಕಾಲ ಗುರುತು ಸಿಗವಷ್ಟು ಬದಲಾಯಿಸಿಬಿಟ್ಟಿದೆ. ಅಂದು ಪ್ರಾಚ್ಯ ಸಂಸ್ಕೃತಿಯ ಪರಿಶೋಧನೆ, ದೇಶ ಸ್ವಾತಂತ್ರಕ್ಕಾಗಿ ಸಂಗ್ರಾಮ, ಗಾಂಧಿಜಿಯ ಮಹಾವ್ಯಕ್ತಿತ್ವ. ಇಂದು ಸ್ವಾತಂತ್ರ್ಯಲಭಿಸಿ ಆರ್ಥಿಕ ಪುರೋಽಭಿವೃದ್ಧಿಗಾಗಿ ನವಯೋಜನೆಗಳ ನಿರ್ಮಾಣ. ಗ್ರಾಮಜೀವನಕ್ಕೂ ನಾಗರಿಕ ಜೀವನಕ್ಕೂ ನಡುವಣ ಅಂತರ ಅಂದಿಗಿಂತ ಇಂದು ಹೆಚ್ಚಾಗಿದೆ. ಒಂದು ಕಡೆ ಮನಶ್ಶಾಸ್ತ್ರ ಚಿತ್ತದ ಆಳವನ್ನು ಬೆದಕುತ್ತಿದೆ. ಇನ್ನೊಂದುಕಡೆ ಭೌತಶಾಸ್ತ್ರ ಅಣುವನ್ನೊಡೆದಿದೆ. ಮಹಾಯುದ್ಧಗಳ ಫಲಿತಾಂಶವಾಗಿ ನೈತಿಕನೆಲೆಗಟ್ಟೇ ಸಡಿಲವಾಗುತ್ತಿದೆ. ಅಭೂತಪೂರ್ವವಾದ ಜೀವಹಾನಿ, ಎಂದಿಲ್ಲದ ಚಿತ್ತಗ್ಲಾನಿ. ಜಗತ್ತಿನ ಚರಿತ್ರೆ ಪ್ರಗತಿಪರವೆಂದು ಇಟ್ಟುಕೊಂಡಿದ್ದ ನಂಬಿಕೆಯ ದೃಢತೆ ಬಹುಮಟ್ಟಿಗೆ ಸಡಿಲಿದೆ. ಅಂದಿನ ಕಾಲಕ್ಕನುಗುಣವಾಗಿ ನಮ್ಮ ಹಿರಿಯ ಕವಿಗಳು ಇಂಗ್ಲೆಂಡಿನ ಹತ್ತೊಂಭತ್ತನೆ ಶತಮಾನದಾದಿಯ ರೊಮ್ಯಾಂಟಿಕ್ ಕವಿಗಳ ಮಾರ್ಗವನ್ನು ಅನುಸರಿಸಿ ಪ್ರಕೃತಿ, ಬ್ರಹ್ಮಶಕ್ತಿ, ಪ್ರೇಮ, ಸ್ವಾತಂತ್ರ್ಯ ಈ ಮಹಾ ವಿಷಯಗಳನ್ನು ಕುರಿತು ಬರೆದರು. ಆ ಕವಿಗಳಂತೆ ತಾವೂ ಜನಪದ ಸಾಹಿತ್ಯದಿಂದಲೂ ಷೇಕ್ಸ್‌ಪಿಯರ್‌ನ ನಾಟಕಗಳಿಂದಲೂ ಮಿಲ್ಟನ್‌ನ ಮಹಾಕಾವ್ಯದಿಂದಲೂ ಸ್ಫೂರ್ತಿಪಡೆದರು.

ಇಪ್ಪತ್ತನೆ ಶತಮಾದಲ್ಲಿ ಇಂಗ್ಲೆಂಡಿನಲ್ಲಿ ಈ ರೊಮ್ಯಾಂಟಿಕ್ ಕವಿಸಂಪ್ರದಾಯ ಕಳೆದು ನವ್ಯಕಾವ್ಯದ ಮಾರ್ಗ ರೂಢಿಗೆ ಬಂದಿದೆ. ಏಟ್ಸ್, ಎಲಿಯಟ್, ಆಡೆನ್ ಮತ್ತು ಡಿಲನ್‌ಥಾಮಸ್ ಈ ಕಾಲದ ಮುಖ್ಯ

ಕವಿಗಳು. ಈ ಮಾರ್ಗ ಬಹುಮಟ್ಟಿಗೆ ಹತ್ತೊಂಭತ್ತನೆ ಶತಮಾನದ ಕಡೆಯ ದಶಕಗಳಲ್ಲಿ ಫ್ರಾನ್ಸಿನಲ್ಲಿ ಆರಂಭವಾಗಿ ಯೂರೋಪಿನ ಎಲ್ಲ ದೇಶಗಳಿಗೂ ಹರಡಿದ ಸಿಂಬಲಿಸ್ಟ್ ಕವಿಸಂಪ್ರದಾಯದ ಒಂದು ಶಾಖೆ. ಎಲಿಯಟ್‌ನ ಕಾವ್ಯದ ವಿಶಿಷ್ಟಗುಣಗಳನ್ನು ತಿಳಿದುಕೊಂಡರೆ ಈ ಸಂಪ್ರದಾಯವನ್ನು ಅನುಸರಿಸುವ ನಮ್ಮ ನವ್ಯಕವಿಗಳ ಅಗ್ರೇಸರರಾದ ಅಡಿಗರ ಶೈಲಿಯನ್ನು ಅರ್ಥಮಾಡಿಕೊಳ್ಳಲು ಸಹಾಯವಾಗುವುದು.

ರೋಮಾಂಟಿಕ್ ಕವಿಗಳು ಅದ್ವೈತಿಗಳು. ಮನುಷ್ಯನು ತನ್ನ ದಿವ್ಯ ಅನುಭೂತಿಯಿಂದ ಮನುಷ್ಯತ್ವವನ್ನು ನೀಗಿ ಬ್ರಹ್ಮದೊಂದಿಗೆ ಐಕ್ಯನಾಗುವನು ಎಂಬುದು ಅವರ ನಂಬಿಕೆ. ಆದರೆ ಎಲಿಯಟ್‌ನ ದೃಷ್ಟಿಯಲ್ಲಿ ಮಾನವನು ಜನ್ಮತಃ ಪಾಪಿ. ಬರಿಯ ಸೌಂದರ್ಯಗ್ರಹಣನಾದ ರಸ ನಿಮಿಷಗಳ ದಿವ್ಯಾನುಭೂತಿ ಸಾಲದು, ತಪಸ್ಸು ಪರಿಶುದ್ಧವಾದ ಜೀವನವೂ ಅಗತ್ಯ, ದೇವರ ದಯೆಯಿಂದ ಅವನಿಗೆ ಮುಕ್ತಿ ಸಿಗಬೇಕಾದರೆ. ರೋಮ್ಯಾಂಟಿಕ್ ಕವಿಗಳು ಹೆಚ್ಚಾಗಿ ಸುಂದರ ದಿವ್ಯದೃಶ್ಯಗಳನ್ನು ವರ್ಣಿಸಿದರೆ ಎಲಿಯಟ್ ಸೌಂದರ್ಯ ಅಸೌಂದರ್ಯಗಳ ಕೆಳಗಿರುವ ಅತೃಪ್ತಿ ನಿರಾಶೆ ಭಯ ಪಶ್ಚಾತ್ತಾಪ ದೈವಿಕತೆಯ ಕಣಸು ಇವುಗಳನ್ನು ವರ್ಣಿಸುತ್ತಾನೆ. ರೋಮ್ಯಾಂಟಿಕ್ ಕವಿಗಳು ಕಾರ್ಖಾನೆಗಳ ಹೊಗೆಯಿಂದ ಮಲಿನವಾದ ಧನದಾಹದ ನಗರಗಳನ್ನು ತ್ಯಜಿಸಿ ಪ್ರಕೃತಿಯ ಮಡಲಿಗೆ ಆಶ್ರಯಕ್ಕಾಗಿ ಹೋದರು. ಎಲಿಯಟ್ ಕಾವ್ಯವನ್ನು ಮತ್ತೆ ನಗರವರ್ಣನೆಗೆ ಹಿಂದಕ್ಕೆ ತಂದಿದ್ದಾನೆ. ಸೌಂದರ್ಯದ ಮೂಲಕ ದಿವ್ಯಸತ್ಯದ ಅನುಭವವನ್ನು ಕೊಡುವ ಕಲ್ಪನಾಶಕ್ತಿ ರೋಮ್ಯಾಂಟಿಕ್ ಕವಿಗಳದಾದರೆ, ಭಾವಾತಿರೇಕವಾಗದಂತೆ ಬುದ್ಧಿಭಾವಗಳ ಸಮ್ಮಿಲನದ ಮನಶ್ಶಕ್ತಿ ನವ್ಯಕವಿಗಳದು. ಬುದ್ಧಿ ಚಮತ್ಕಾರದಿಂದ ಹಾಸ್ಯಕರವಾಗಿ ಬರೆದ ವಿಡಂಬನೆ ಭಾವೋದ್ವೇಗದಿಂದ ಬರುವ ಗೀತ ಹೀಗೆ ವಿಂಗಡವಾಗದೆ ಒಂದಕ್ಕೊಂದು ಪೋಷಕವಾಗಿ ಎರಡೂ ಬೆರೆಯಬೇಕು. ಅಲ್ಲದೆ ಕಾವ್ಯದಲ್ಲಿ ಗದ್ಯಾಂಶ ಮತ್ತು ತಾರ್ಕಿಕನ್ಯಾಯಬದ್ಧವಾದ ಮಾರ್ಗ ಕಡಿಮೆಯಾದರೆ ಕಾವ್ಯ ತನ್ನ ಶುದ್ಧತೆಯನ್ನು ಮತ್ತೆ ಪಡೆದುಕೊಳ್ಳಬಲ್ಲುದು. ರೋಮ್ಯಾಟಿಕ್ ಕವಿಗಳು ಕತೆಹೇಳುವ ಟೀಕಿಸುವ ವಿವರಿಸುವ ವರ್ಣಿಸುವ

ಕಾರ್ಯಗಳಲ್ಲಿಯೂ ಆಸಕ್ತರಾಗುತ್ತಾರೆ. ನವ್ಯಕವಿ ಆದಷ್ಟುಮಟ್ಟಿಗೆ ಈ ಅಂಶಗಳನ್ನು ಬಿಟ್ಟು ತನ್ನ ಕಟ್ಟಡವನ್ನು ಬಿಗಿಯಾಗಿಯೂ ಓರಣವಾಗಿಯೂ ನಾಟಕೀಯವಾಗಿಯೂ ಶುದ್ಧವಾಗಿಯೂ ಮಾಡಿಕೊಳ್ಳುತ್ತಾನೆ. ಹಿಂದಿನ ಕವಿಗಳು ಪ್ರಕೃತಿಯಿಂದ ರೂಪಕಗಳನ್ನು ತೆಗೆದುಕೊಂಡಂತೆ ಇಂದಿನ ಕವಿ ನಾಗರಿಕ ಜೀವನದಿಂದ ರೂಪಕಗಳನ್ನು ತೆಗೆದುಕೊಳ್ಳುವುದಷ್ಟೇ ಅಲ್ಲದೆ ರೂಪಕಗಳನ್ನೇ ಬಿಟ್ಟು ಪ್ರತಿಮೆ ಅಥವಾ ಸಂಕೇತಗಳನ್ನು ಉಪಯೋಗಿಸುತ್ತಾನೆ. ಒಂದನ್ನಿನ್ನೊಂದಕ್ಕೆ ಹೋಲಿಸದೆ ಒಂದನ್ನಿನ್ನೊಂದೆಂದೇ ಇಟ್ಟುಕೊಂಡು ಇವನು ಚಿತ್ರಿಸುತ್ತಾನೆ. ಈ ಪ್ರತಿಮೆಗಳನ್ನು ನೇಯುವಾಗ ಗದ್ಯತರ್ಕದ ಕಡೆ ಗಮನಕೊಡದೆ ನಮ್ಮ ಮನಸ್ಸಿನಲ್ಲಿ ಹೇಗೆ ಅವು ಕೂಡುವುವೋ ಹಾಗೆಯೇ ಜೋಡಿಸುತ್ತಾನೆ. ಈ ಸಂಕೇತಗಳು ನಾಗರಿಕ ಜೀವನದಿಂದ ವೈಯುಕ್ತಿಕ ಅನುಭವದಿಂದ ಸ್ವಪ್ನಗಳಿಂದ ಸಾಹಿತ್ಯಕೃತಿಗಳಿಂದ ಬರಬಹುದು. ಎಲಿಯಟ್‌ನ ಮೊದಲ ಕವಿತೆಗಳಲ್ಲಿ ಪೂರ್ವಸಾಹಿತ್ಯದಿಂದ ಉದ್ಧೃತವಾಕ್ಯಗಳು ಬಹುವಾಗಿ ಬರುತ್ತಿದ್ದವು. ಕ್ರಿಶ್ಚಿಯಾನಿಟಿಯ ತತ್ವದ ಪ್ರತಿಪಾದನೆ ಬಂದಮೇಲೆ ಈ ಸಾಧನ ಕಡಿಮೆಯಾಗಿದೆ. ಈ ನಾಟಕೀಯ ಪ್ರತಿಮಾ ಚಿತ್ರಗಳನ್ನು ಕೊಡುವಾಗ ಹಳೆಯ ಛಂದೋರೂಪಗಳನ್ನು ಬಹುಮಟ್ಟಿಗೆ ಬಿಟ್ಟು ಇವನು ಸ್ವತಂತ್ರ ಛಂದಸ್ಸನ್ನು ಪ್ರಯೋಗಿಸುತ್ತಾನೆ. ಇವನು ನಾಟಕಗಳನ್ನು ಬರೆಯುವಾಗ ಸರಳಗಳೆಯನ್ನೂ ಷೇಕ್ಸ್‌ಪಿಯರನ ನಾಟಕಗಳ ರೂಪವನ್ನೂ ಅನುಸರಿಸಿದರೆ ಷೇಕ್ಸ್‌ಪಿಯರನ ಛಾಯೆ ಬರವಣಿಗೆಯನ್ನು ಮುಸುಕಿ ಮುಸುಕುಮಾಡುವುದೋ ಎಂದು ಅವುಗಳನ್ನು ಬಿಟ್ಟಿದ್ದಾನೆ. ಇವನ ಛಂದೋಗತಿ ಇಂದಿನ ಮಾತುಕತೆಗೆ ತೀರ ಸಮೀಪವಾಗಿ ಹಲವುಸಲ ಬರುತ್ತದೆ. ಇಂದಿನ ಹಲವು ಹೊಸಪದಗಳನ್ನು ಕಾವ್ಯದಲ್ಲಿ ಮೊಟ್ಟಮೊದಲು ಬಳಸಿದ್ದಾನೆ. ಆದರೆ ಕಾವ್ಯದ ವಿಶಿಷ್ಟವಾದ ಛಂದಸ್ಸಂಗೀತ ಇವನ ಪರಮಗುರಿ.

ಅಡಿಗರ ದೃಷ್ಟಿಗೂ ನಮ್ಮ ಹಿರಿಯ ಕವಿಗಳ ದೃಷ್ಟಿಗೂ ಅಂತರವೇನೆಂದು ನೋಡಲು ಅಡಿಗರ ಕಾವ್ಯದ ವಸ್ತುವಿನ ಕಡೆ ಗಮನಿಸೋಣ. ಹಿಮಗಿರಿಯ ಕಂದರದ ತಪೋನಂದನದ ಅನಂತ ಶಾಂತಿಯನ್ನು ರಸನಿಮಿಷಗಳ

ಭಾವಸಮಾಧಿಯಲ್ಲಿ ಅನುಭವಿಸಿ ಈ ಗೊಂದಲಲೋಕದ 'ದೈನಂದಿನ ದೈನ್ಯ'ವನ್ನು ಅವರು ಮರೆತು ತೃಪ್ತಿಪಡೆಯುವಂತೆ ಅಡಿಗರು ಪಡೆಯಲಾರರು. ಜೀವನವೇ ಪೂರ್ಣವಾಗಿ ಪರಿವರ್ತಿತವಾಗಬೇಕು. ರಸನಿಮಿಷ ತಾರಾಕ್ಷೀರಪಥವಾಗಬೇಕು. ಭೂಮಿಯಮೇಲೆ ನಮ್ಮಪಾಲಿಗೆ ಬರುವ ಪಂಚಾಮೃತವಿಷ್ಟೇ ಎಂದು ಕೆಲವು ದಿವ್ಯಘಳಿಗೆಗಳಿಂದ ತೃಪ್ತಿಯಿಲ್ಲ. ಬುದ್ಧನು ಹೇಳುವಂತೆ ಈ ಬಾಳು ಪೂರ್ಣಶುದ್ಧಿಯನ್ನು ಪಡೆಯಬೇಕು, ಅನೂಹ್ಯಲೋಕದ ಅನಂತಯಾತ್ರಿಕರು ನಮ್ಮ ಮನೋಮಂದಿರದಲ್ಲಿ ಹೀಗೆ ಮಿಂಚಿ ಹಾಗೆ ಮಾಯವಾಗುವ ಅತಿಥಿಗಳು. ಪ್ರಕೃತಿಯ ದೃಶ್ಯದೀಪಕಗಳ ಪುಣ್ಯಪ್ರಭೆಯಲ್ಲಿ ಒಮ್ಮೊಮ್ಮೆ ಅವರು ಗೋಚರವಾಗುವರು ಆವರೆ ಮರುಘಳಿಗೆಯಲ್ಲೇ ಮೈಗರೆದು ಮನಸ್ಸು ಬೆಕೋ ಎನ್ನುವಂತೆ ಮಾಡುವರು. ಪೇರಳ ಗಿಡದಡಿಯಲ್ಲಿ ಮುಗುತನವು ಕಟ್ಟುವ ಮರಳ ಮನೆ ಬಾಗಿಲಿಗೆ ಬೃಂಹಿತ ಸಂಹಿತೆಯೊಡನೆ ಬೆಳಕಿ 'ನಾನೆ ಬಂತೊಂದಾನೆ'. ಆದರೆ ಪ್ರೌಢವಯಸ್ಕನೋ, 'ಎಲಾ ಇವನ, ಕಿಟಕಿಯೆಲ್ಲ ಮುಚ್ಚಿದ, ಕದವಿಕ್ಕಿದ; ಕತ್ತಲಲ್ಲಿ ಕುಕ್ಕರಿಸಿದ.' ಪೂರ್ಣತೆಯ ದುರ್ದಮ್ಯವಾಂಛೆ ಬಾಲನನ್ನು ಸ್ನೇಹಭಿಕ್ಷೆಗಾಗಿ ಬಾಳಬೀದಿಗಳಲ್ಲಿ ಓಡಿಸುವುದು. ಆದರೆ ಹೀಗೆ ಸಿಗುವುದು ಹೊಟ್ಟೆಗೆ ಸಾಲದು. ತರುಣನ ಪ್ರೇಮದ ಅರಗಿಳಿಯನ್ನು ಬೆಕ್ಕಿನಂತೆ ಕಾಲ ಕದ್ದೊಯ್ದು ಉಳಿಯುವುದು ಕಾಮ, 'ರಕ್ತಮಾಂಸದ ಬಿಸಿದು ಸೋಂಕಿನ ಪಂಜರ.' ಬಯಕೆ ತೋಟದ ಬೇಲಿಯೊಳಗೆ ಮೇಯುವ ಮಾಯಾ ಪಶುವಿಗೆ ದೂರಬೃಂದಾವನದ ಮೋಹನ ಮುರಳಿಯ ಮಿಂಚಿನಕರೆ ಬಂದು ಅದರ ಜೀವ 'ಇರುವುದೆಲ್ಲವ ಬಿಟ್ಟು ಇರದುದರೆಡೆಗೆ' ತುಡಿಯುವುದು. ರತಿತಮಾಲಚ್ಛಾಯೆಯಲ್ಲಿ ಹೀಗೆ ಬೊಧಿವೃಕ್ಷದಗ್ನಿಛತ್ರಿ ಬಿಚ್ಚಿದಾಗ ಹಿಮಗಿರಿಯ ಕಂದರಕ್ಕೆ ಹೊರಡಲನುವಾಗಿ ಕರ್ಮದ ಗಂಟನ್ನು ಹೊತ್ತು ಜೀವಿ ಓಡುವನು. ಆದರೆ ಅವನು ಕಾಯುವ ನಿಲ್ದಾಣಕ್ಕೂ ಹಿಮಗಿರಿಯ ರೈಲಿಗೂ ನಡುವೆ, ಇಂದ್ರಿಯ ಜೀವನಕ್ಕೂ ಆಧ್ಯಾತ್ಮಿಕ ಜೀವನಕ್ಕೂ ನಡುವೆ ಸದಾ ಬಾಯ್ದೆರೆದ ಕಮರಿಯ ಮೇಲೆ ಋಷಿನಿರ್ಮಿತವಾದ ಸೇತುವೆ ಮುರಿದುಬಿದ್ದಿದೆ. ಅಂಥ ನಿರನುಭವಿ, ಸಾವಧಾನಪರಾಮರ್ಶ ವಿರೋಧಿ, ನಿಷ್ಕರುಣಿ, ಕಪಟ, ಭೂತರಾಕ್ಷಸೋಪಮ, ಪಾರ್ಟಿ

ಲೈನ್ ಕಣ್ಣು ಪಟ್ಟಿಯ ಕುದುರೆಯ ಭಕ್ತರು ವೈಕುಂಠದಿಂದ ಗೊಂದಲಪುರದ ವರೆಗೆ ಫಿಶ್‌ಪ್ಲೇಟ್ ತೆಗೆದು ಕಂಬಿಕಿತ್ತು ಸ್ಟೇಷನ್ ಸುಟ್ಟಿದ್ದಾರೆ. ಹಿಮ ಗಿರಿಯ ರೈಲು ಹಿಂದೆ ಹಿಂದೆ ಹೋದಂತೆ ಅದರ ಗಾಲಿಗಳ ಸದ್ದು ಅಸ್ಫುಟ ವಾಗುವಂತೆ ಜೀವಿ ತನ್ನ ವಿಫಲಾಕಾಂಕ್ಷೆಯನ್ನು ನುಡಿಯುತ್ತಾನೆ:

'ಹಿಮಗಿರಿಯ ಕಂದರ
.... ಗಿರಿಯ ಕಂದರ
..... ....ಕಂದರ
...........ದರ
.............ರ'

ಜಗತ್ತಿನ ಜೀವನ ದಿನದಿನಕ್ಕೆ ಹೆಚ್ಚು ಸುಖಮಯವಾಗುತ್ತಿಲ್ಲ. ಅನೀತಿಯಿಂದ ಸರ್ವೋದಯ ಪ್ರಯತ್ನಗಳು ಮತ್ತೆ ಮತ್ತೆ ಮಣ್ಣುಗೂಡು ತ್ತಿವೆ. ಹೊಸವರುಷ ಬಂದರೆ ಮನುಷ್ಯ ಅದನ್ನು ಕೇಳುತ್ತಾನೆ. 'ತಂದೆ ಯೇನು ಹೊಸಹಡಗನೊಂದ ನೀ ಬಂದ ರೇವಿನಿಂದ?' ಆದರೆ ಅದೂ 'ಹೂವು ಬಾಡಿ ತರಗೆಲೆಗಳುದುರಿ ಬೋಳಾಗಿ ಬಳ್ಳಿಬಳ್ಳಿ' ಕಂತುವುದು. ಎತ್ತಿದ ಕಾಲನ್ನು ಮತ್ತೆ ಕೆಳಗೆಳೆದುಕೊಳ್ಳುವ ಪಂಕಲೋಕದ ಈ ಕುತ್ತಿನ ಮೇಲೆ ಅಡಿಗರ ಕವಿತೆಯಲ್ಲಿ ಯಾವಾಗಲೂ ಒತ್ತು ಬೀಳುತ್ತದೆ. ಆಧ್ಯಾ ತ್ಮಿಕ ಅನುಭೂತಿಯ ನಿರ್ಗಮನದಿಂದಾದ ನಿರ್ವೇದದಲ್ಲಿ ಅವರ ಹೃದಯ ಮಂದರ ಮಿಡಿಯುತ್ತದೆ. ಕಾಮಕ್ರೋಧಾದಿ ತಮೋಗುಣಗಳೆಡೆಗೆ ಜಗ್ಗುವ ಗೊಂದಲಾಸುರನ ಮೇಲೆ ಅವರ ಕಣ್ಣು ಕಿಡಿ ಕಾರುತ್ತದೆ.

ಸಪ್ತಸಾಗರಗಳಾಚೆ ಇರುವುದೆಂದು ತೋರುವ ಸುಪ್ತಸಾಗರ ನಮ್ಮ ಅಂತರಂಗರದ ಆಳವಲ್ಲಿದೆ. ಅದರಿಂದೇಳುವ ಬುದ್ಬುದಾದ್ಭುತಗಳೂ ಮೂಕಮರ್ಮರಗಳೂ ನಾಟಕೀಯವಾಗಿ ವ್ಯಕ್ತಿಭಾವಗಳನ್ನು ವ್ಯಕ್ತಗೊಳಿ ಸುತ್ತವೆ. ಈ ಸ್ವಾಪ್ನಿಕ ಧರ್ಮವುಳ್ಳ ಸಂಕೇತಚಿತ್ರಗಳಿಗೆ 'ಹಿಮಗಿರಿಯ ಕಂದರ' ಮತ್ತು 'ಗೊಂದಲಪುರ' ದಿಂದ ನಿದರ್ಶನಗಳನ್ನು ಕೊಡ ಬಹುದು. ಬುದ್ಧನು ಕಾಮದಿಂದ ಲೋಕಸುಡುತ್ತಿದೆಯೆಂದೂ ಇಂದ್ರಿ ಯನಿಗ್ರಹದಿಂದ ನಾವು ಅಗ್ನಿದಾಹದಿಂದ ತಪ್ಪಿಸಿಕೊಳ್ಳಬೇಕೆಂದೂ

ಉಪದೇಶವಮಾಡಿದನು. ಎಲಿಯಟ್ ಇದನ್ನ 'The waste Land' ಎಂಬ ಕವನದ ಮೂರನೆ ಭಾಗದಲ್ಲಿ ಉಪಯೋಗಿಸಿಕೊಂಡಿದ್ದಾರೆ. ಅಡಿಗರ 'ಹಿಮಗಿರಿಯ ಕಂದರ' ದಹ್ಯಮಾನ ಲೋಕದ ದೃಶ್ಯದೊಂದಿಗೆ ಆರಂಭವಾಗುತ್ತದೆ. 'ಮಿಗ ಹಕ್ಕಿ ಹಣ್ಣು ಹೂ ತಳಿರ ತೇಗಿದ' ಖಾಂಡವಾಗ್ನಿಯಿಂದ ಆಫೀಸೇ ಅಗ್ನಿಕುಂಡವಾಗಿ 'ಮನ ಮಲಗಿತ್ತು ಚಿತೆಯ ಮೇಲೆ.' ಕಾಳಿದಾಸನ ವಾಕ್ಯ ಇದೆಂಥ ಅಗ್ನಿಯೆಂದು ಸೂಚಿಸುತ್ತದೆ: 'ಹರ ಕೋಪಾಲಭಸ್ಮಕೇವಲಂ'. ಇದು ಕಾಮದಹನ. ಈ ಕವಿತೆಯ ಕಡೆಯಲ್ಲಿ ಬರುವ ಭಗ್ನಸೇತುವೆ ಹಿಂದೆ ಹೋಗುವ ರೈಲುಗಳ ಚಿತ್ರ ಇನ್ನೊಂದು ನಿದರ್ಶನ. 'ಗೊಂದಲಪುರ'ದಲ್ಲಿ ಅಂಧನಾಯಕರು ಅಂಧನಾಯಕರು ಅಂಧಜನತೆಯನ್ನು ತಪ್ಪು ತಪ್ಪಾಗಿ ನಡೆಸುವ ಚಿತ್ರ ಇದಕ್ಕೆ ಸಮೀಪವಾಗಿದೆ. ಈ ರಾಜಕೀಯ ಅಂಧಶ್ರದ್ಧೆಯ ಮಹತ್ವಾಕಾಂಕ್ಷೆಯ ಸ್ವಾರ್ಥಿನಿಷ್ಕರುಣಿಗಳು ಪಂಜುರ್ಲಿ ಹಾಯ್ಗುಳಿ ಬೊಬ್ಬರ್ಯ ಜಟ್ಟಿಗ ಮುಂತಾದ ಭೂತಗಳಂತೆಯೂ ಅವರ ಮುಂದಾಳು ಭಡವ ಗೊಂದಲಾಸುರನಂತೆಯೂ ಕವಿದರ್ಶನಕ್ಕೆ ಗೋಚರರಾಗುತ್ತಾರೆ. ಇವರ ಹಾವಳಿಯಿಂದ ಲೋಕವೇ ಕತ್ತಲಿಸಿದೆ. ಈ ಅಸೂರ್ಯಲೋಕದ ವರ್ಣನೆಯಿಂದ ಕವಿತೆ ಆರಂಭಿಸುತ್ತದೆ. ಪೂರ್ವದಲ್ಲುದಿಸಿದ್ದ ಸೂರ್ಯ ಅಪರ ಸಂಸ್ಕೃತಿಯ ಮದ್ಯಕ್ಕೆ ಮಾರುಹೋಗಿದ್ದಾನೆ. ಶಿವನಿಗೆ ನಿದ್ದೆಬರಿಸಿ ಭೂತಗಣ ಕೆಲೆಯುತ್ತಿದೆ. ಖಾಲಿ ಬುರುಡೆಯ ಮೇಲೆ ಎದೆಯ ವಿಪರೀತ ರತಿ. ಭಾಗವತರ ನಾಟಕದಲ್ಲಿ ಗೊಂದಲಾಸುರನ ಪಾತ್ರ ಬಂದು ತನ್ನ ಪ್ರಭುತ್ವವನ್ನು ವರ್ಣಿಸುತ್ತದೆ. ಕಡೆಗೆ ಕವಿಯ ನೆತ್ತಿಯ ಮೇಲೇ ಅಸುರನು ಗರಗಸ ಎಳೆದು ಕವಿ 'ಹರಿ ಹರಿ' ಎಂದು ಕೂಗಿಕೊಳ್ಳುತ್ತಾನೆ. ಈ ಕವಿತೆಯಲ್ಲಿ ಅಡಿಗರು ರತ್ನನ 'ಯೆಂಡದ್ಗೊಂಡ್ರೆ' ಎಂಬ ಪದ್ಯದಿಂದ ಎರಡು ಪಂಕ್ತಿಗಳನ್ನು ಉದ್ಧರಿಸಿ ಅನೈತಿಕ ರಾಜಕೀಯದ ಉನ್ಮತ್ತ ನಿಷ್ಕರುಣೆಯನ್ನು ಒತ್ತಿದ್ದಾರೆ:

ಮನೆಯೊಳಗೆ, ಗುಡಿಯೊಳಗೆ, ಶಾಲೆಯೊಳಗೇ ನೋಡಿ
ಹಾಯುತಿದೆ ನಮ್ಮ ರಸ್ತೆ;
('ಎಲೆಲೆಲೆ ರಸ್ತೆ, ಏನು ಅವ್ವೆವಸ್ತೆ!')

ಕಡೆಯದಾಗಿ ಮೇಲೆ ಹೇಳಿದ ಸಂಕೇತ ಚಿತ್ರಗಳಿಗೆ ಈ ಪುಟ್ಟ ಉದಾಹರಣೆಯನ್ನು ಕೊಡಬಹುದು:

ಟಿಕ್, ಟಿಕ್, ಟಿಕ್, ಟಿಕ್....
ಎಲ್ಲಿ ಇತ್ತೀವಾಚು?
ಕೀಕೊಟ್ಟುದಿದಕೆಷ್ಟು ಜನ್ಮದಾಚೆ?
ಈಗ ಗಕ್ಕನೆ ರೆಕ್ಕೆ ಬಡಿದು ಬಂದಿತು ಇಗೋ
ಕುಕ್ಕುತಿದೆ ಕರುಳನ್ನು—ತಡೆಯಲಾರೆ.

ಹೀಗೆ ನಾಟಕೀಯ ಚಿತ್ರಗಳನ್ನು ಕೊಡುವಾಗ 'ಬುದ್ಧಿಭಾವಗಳ ವಿದ್ಯುದಾಲಿಂಗನದ' ಸ್ಫೂರ್ತಿ ಕಾಣುತ್ತದೆ. ಕೆನರಾ ಜಿಲ್ಲೆಯ ಮೊಂಡು ನೆಲವನ್ನು ವರ್ಣಿಸುತ್ತಾ ಅಡಿಗರು 'ಕೈಯೂ ಕೆಸರು ಬಾಯಿಯೂ ಕೆಸರು' ಎನ್ನುತ್ತಾರೆ. ನವವತ್ಸರಶಿಶು ನಂದನಕ್ಕೆ 'ಚರಂಡಿ ತೀರದಿ ಕೊಳ ಹೆಕ್ಕುವೆಡಗೈ ಸಲಾಮು'. ಹಿಮಗಿರಿಯ ಆಧ್ಯಾತ್ಮಿಕ ಜೀವನದಲ್ಲಿ 'ಸಿಪ್ಪೆ ತಿರುಳಿರದ ಬರಿಬೀಜ ಕುಪ್ಪಳಿಸಿರುವ ತಿನದ ತೇಗಿನ ಮೂಕ ಸರಿಗಮ'. ಆದರೆ ಈ ಜೀವನವನ್ನು ನಡೆಸುವ ಮನೋದಾರ್ಢ್ಯ ಮತ್ತು ತ್ಯಾಗಬುದ್ಧಿಯಿಲ್ಲದೆ ಗೊಂದಲಪುರದ ಇಂದ್ರಿಯಸುಖದ ಅನರ್ಥ ಕ್ರೋಧ ಶಬ್ದ ತುಮುಲದ ಮೋಹಕ್ಕೆ ಅರ್ಧಸೆರೆಯಾದ ಜೀವಿ ಬರಬರುತ್ತಾ ಆಧ್ಯಾತ್ಮಿಕ ಜೀವನವನ್ನೇ ಇಂದ್ರಿಯಸುಖ ಸ್ವರ್ಗವನ್ನಾಗಿ ಕಲ್ಪಿಸಿಕೊಳ್ಳುತ್ತಾನೆ. 'ಕಾಲನಿಟ್ಟಲ್ಲಲ್ಲಿ ಕೀಲುಗುದುರೆ ಸವಾರಿ.... ಎಲ್ಲಿ ತಿರುಗಿದರಲ್ಲಿ ಅಮೃತಸೂಸುವ ನಲ್ಲಿ.' ಹಿಮಗಿರಿಯ ಕಂದರಕ್ಕೆ ಬದಲು ಒಂದು ಮಂಜಿನ ಉಪಾಹಾರ ಗೃಹವನ್ನು ಆಶಿಸುತ್ತಾನೆ. 'ಗೊಂದಲಪುರ'ದಲ್ಲಿ ವಿಡಂಬನೆ ಹೆಚ್ಚಾಗಿ ಉಪಯೋಗಿಸಲ್ಪಟ್ಟಿದೆ. ಒಂದೇ ಕಡೆ ಕುಳಿತು ಆಲೋಚನಾ ಮಗ್ನನಾದ ಶಾಂತನನ್ನು ಗೊಂದಲಾಸುರ ಎಚ್ಚರಿಸುತ್ತಾನೆ: 'ಏಳು ಇಲ್ಲವೊ ಮತ್ತೆ ಏಳಲಾರೆ!' ಪಾರ್ಟಿಯ ಪುಢಾರಿಗಳಲ್ಲೇ ಮಹತ್ವಾಕಾಂಕ್ಷೆಯ ನಿರ್ದಯ ಸ್ಪರ್ಧೆ ಹೀಗೆ ವ್ಯಂಗ್ಯವಾಗಿ ಚಿತ್ರಿತವಾಗಿದೆ:

ಜಾರಬಾರದೆ ಪಾಪಿ ಕೊಂಚ....
ಯಾವಾಗಲೂ ನನ್ನ ಮೇಲೇ ಇವನ ಕಣ್ಣು, ನಡೆವಾಗಲೂ,
ಪೂಜೆ ನಡೆವಾಗಲೂ;
ಅವನು ಸಾಯದೆ ನಾನು ಬದುಕಲೆಂತು?
ಸುಲಿಗೆ ನಿಲುವುದೆಂತು? ಸ್ವರ್ಗ
ವೊಳಿವುದೆಂತು? ಲೋಕ
ಉಳಿವುದೆಂತು?

ಸುಲಿಗೆಯನ್ನು ನಿಲ್ಲಿಸುವ ಧ್ಯೇಯದಿಂದ ಹೊರಟು ತಾವೇ ಸುಲಿಗೆಗಾರರಾದ ಪಾರ್ಟಿ ಜನರ ಚಿತ್ರ ವಿಕಟ ವಿಡಂಬನೆಗೆ ಒಳ್ಳೆ ಉದಾಹರಣೆ.

ವಿವರಣೆ ವರ್ಣನೆ ಚರ್ಚೆ ಇವುಗಳು ಆದಷ್ಟು ಕಡಿಮೆಯಾಗುವಂತೆ ಪ್ರತಿಮಾಚಿತ್ರಗಳನ್ನು ಅರ್ಥದ್ಯೋತಕವಾಗಿ ಸ್ವತಂತ್ರಛಂದಸ್ಸಿನಲ್ಲಿ ಸಂಯಮದಿಂದ ನೆಯ್ದಿರುವುದಕ್ಕೆ 'ದೀಪಾವಳಿ' ಎಂಬ ಕವನವನ್ನು ಉದಾಹರಿಸಬಹುದು. ಮಕ್ಕಳ ಮುದಮುದಗಜನಿನಾದ ಹೊರಗಿದ್ದರೂ ಕೋಣೆಯ ಕಿಟಕಿ ಕದಗಳನ್ನು ಮುಚ್ಚಿ ಕಗ್ಗತ್ತಲಲ್ಲಿ ಕುಕ್ಕರಿಸಿದ್ದಾನೆ ಬೆಳೆದ ಮನುಷ್ಯ. ಅವನಿಗೆ ಕವಿ ಬುದ್ಧಿವಾದ ಹೇಳುತ್ತಾನೆ:

ಮೌನ ಮುಸಣ ಬೂದಿ ಬಿಟ್ಟು ಕೆಂಗೆಂಡದ ನುಡಿಕಿಡಿ ಬಾ
ತಟ್ಟು ಕದ, ತಟ್ಟು ಹದ:
ಗೂಟದ ಕರು ಬಾ; ಕೆಚ್ಚಲ ಕುಟ್ಟು ಗುಮ್ಮು;
ಒಸರಿತು ಸೊನೆ; ಹಸುರು ನೆಲ;
ಕೋಟೆಯ ಹೆಬ್ಬಾಗಿಲ ಬಳಿ
'ಆನೆ ಬಂತೊಂದಾನೆ'

ಬಾಗಿಲು ತೆಗೆದು ಆನೆಯನ್ನು ಒಳಗೆ ಬಿಡಲು ಅಥವಾ ಇವನೇ ಆನೆಯೊಡನೆ ಆಟವಾಡಲು ಬೇಕೇ

ಬೀಗದ ಕೈ?....
ಪೇರಳೆಗಿಡದಡಿ ಹೂವಿನ ಹುಡಿರಾಡಿಯ ಕೆದಕು, ಬೆದಕು.
ಹುಡುಕಿ ತರುವ ಛಟ, ಅಥಟ?

ಮರಿತೆಯ ಆ ಅದ್ಭುತ ದೀಪದ ತುಕ್ಕಿನ ಕಕ್ಕುಲಾತಿ?

'ಏನಪ್ಪಣೆ, ಏನಪ್ಪಣೆ'

ಆದರೆ ಶೈಶವದ ಆನಂದವನ್ನು ಮತ್ತೆ ಅನುಭವಿಸಲು ಪ್ರೌಢವಯಸ್ಕ ಅಶಕ್ತ, ಉದಾಸೀನ. ಕವಿ ಮತ್ತೆ ಬುದ್ಧಿ ಹೇಳುತ್ತಾನೆ:

ಹೊರಗೆ ವಿದ್ಯುದ್ದೀಪ ಲಹರಿ ಲಹರಿ ....
ಅಂತಃಪುರದಿ ಮಾತ್ರ ಅಂಧಕಾರಾಲಾಪ,
ಬೇಡಕಣೊ, ಸುಖದ ಕ್ಷಣ ಹಿಡಿದು ಹಾಕಿಸು ಕಟ್ಟು;
ಕಣ್ಣುಮುಂದೇ ಅದನು ತೂಗು ಹಾಕು.
ಇಂದು ದೀಪಾವಳಿಗೆ ತೆರೆ ಅಗಲ ಬಾಗಿಲ.
ಸೊಂಡಿಲಾಡಿಸಿ ಬರಲಿ. ಆನೆ, ಮುದ ಮದ್ದಾನೆ.
ಬೆಳಕು ಬೃಂಹಿತದ ಸಂಹಿತೆ ಕೇಳಿ ತೊಳೆಯಲಿ
ಒಳಮನೆಯ ಕಸವು ಕೊಳೆ....
ಪೇರಳೆ ಗಿಡದ ಕೆಳಗೆ ಮತ್ತೆ ಕ್ಷಣ ಮರಳ ಮನೆ.
ಎಲ್ಲು ಹೋಗದು ಕಣೋ ನಿನ್ನ ಆ ಕಾಳಕೋಣೆ.

ಶೈಶವದ ಸುಖವನ್ನು 'ಆನೆ ಬಂತೊಂದಾನೆ', ದೀಪಾವಳಿಯ ಸಮಯದ 'ಬೆಳಗುತಿಳಿಮುಖ ಸುಖದ ಬಿಂದು', ಪೇರಳೆ ಗಿಡದ ಕೆಳಗಿನ ಮರಳ ಮನೆಯಾಟ, 'ಅದ್ಭುತದೀಪ'ದ ಕತೆಯೋದು, ಎಂಬ ಸಂಕೇತ ಗಳಿಂದ ಚಿತ್ರಿಸಿದೆ. ಇವುಗಳಲ್ಲಿ ಮುಖ್ಯವಾದೆರಡು ಕಡೆಯಲ್ಲಿ ಎಷ್ಟು ಸುಂದರವಾಗಿ ಒಟ್ಟುಗೂಡಿವೆ 'ಬೆಳಕು ಬೃಂಹಿತೆ' ಎಂಬ ಮಾತಿನಲ್ಲಿ!

ಬಿಗಿಯಾದ ಛಂದಶ್ಶಿಲ್ಪಕ್ಕೆ ಈ ಕವನ ಒಳ್ಳೆ ಉದಾಹರಣೆ. ಸ್ವತಂತ್ರ ಛಂದಸ್ಸಾದರೂ ಸ್ವಲ್ಪವೂ ಗತಿಯ ಮತ್ತು ಒಟ್ಟುರೂಪದ ಚೆಲುವು ಎಲ್ಲಿಯೂ ಕೆಡುವುದಿಲ್ಲ. ಅಡಿಗರು ತಮ್ಮ ಹೊಸಮಾರ್ಗದಲ್ಲಿ ಛಂದಸ್ಸನ್ನು ಅರ್ಥವತ್ತಾಗಿ ಜನರ ಮಾತಿಗೆ ಸಮೀಪವಾಗಿ ಮಧುರವಾಗಿ ಓರಣವಾಗಿ ಉಪಯೋಗಿಸುವ ಅದ್ಭುತ ಶಕ್ತಿಯನ್ನು ಆಗಲೇ ಪಡೆದುಕೊಂಡಿದ್ದಾರೆ. 'ಹಿಮಗಿರಿಯ ಕಂದರ'ದ ಕಡೆಯಲ್ಲಿ ಜೀವಿಯ ಎದೆಯೊಳದಾಸೆ ದೂರವಾಗುತ್ತಿರುವ ರೈಲಿನ ಸದ್ದಿಗನುಗುಣವಾಗಿ ಮಂಜಿನಗಡ್ಡೆ ಬಿಸಿಲಿನಲ್ಲಿ ಮೆಲು ಮೆಲನೆ ಕರಗುವಂತೆ ಕರಗುವುದರ ಶಬ್ದ ಚಿತ್ರವಿದೆ:

' ಹಿಮಗಿರಿಯ ಕಂದರ....
....ಗಿರಿಯ ಕಂದರ....
.........ಕಂದರ....
...........ದರ....
.............ರ...'

ಭಾಗವತ ನಾಟಕದ ಸಂಭಾಷಣೆಯ ಈ ಅನುಕರಣವನ್ನು ನೋಡಿ:

' ಬನ್ನಿರಯ್ಯ, ಇರುವಂಥಾ ಸ್ಥಳ?....
' ಚಂಡೆ ಮದ್ದಲೆ ಭೇರಿದುಂದುಭಿ ತಮಟೆ ಶತಗಾರ್ದಭ
ಕಂಠತ್ರಾಣ....
ಸದ್ದೆಂತೆಂಬರ ಗಂಡ;
ಮೌನಿಮುನಿ ಋಷಿ ಧ್ಯಾನಿ ವಿಜ್ಞಾನಿ ಎಂತೆಂಬ ಚಿಂತಕ
ಹಂತಕ ಜನ ಮಿಂಡ....
ಭೋ ಪರಾಕ್, ಭೋ ಪರಾಕ್!'

ಅಥವಾ ಈ ಭೂತಗಳ ವರ್ಣನೆಯನ್ನು:

' ಎಲಲಲಲಲ ಕೇೞೞಹೊ'
ಎತ್ತಿ ಹೊರಟಿವೆ ಕರಿಪತಾಕೆ ಹಾಕುತ ಕೇಕೆ ಊರೂರು
ಕೇರಿಕೇರಿ
ಅಂತರಿಕ್ಷದಲಿ ಅಂತರ್ಲಾಗ ಹಾಕುತಿವೆ, ಅರಚುನಾಲಗೆ,
ಅಹಾ,
ಕಿರುಚುನಾಲಗೆ, ಒಸೋ ತುರಿಚಿ ನಾಲಗೆ....

ಅಥವಾ ಈ ಮಾತಿನ ಧಾಟಿಯ ನಾಟಕೀಯ ಪ್ರಥಮಪಂಕ್ತಿಯನ್ನು:

ನೀನೂ ಬಂದೆಯ, ಬಾ, ಮಗು ನಂದನ

ಅಥವಾ ಬಳಕೆಯ ಮಾತಿನ ಧಾಟಿಯನ್ನೂ ಉನ್ನತ ಶೈಲಿಯ ಧಾಟಿಯನ್ನೂ ಹದವಾಗಿ ಬೆರೆಸಿರುವ ಈ ಭಾಗವನ್ನು ನೋಡಿ:

ರತಿತಮಾಲಚ್ಛಾಯೆಯಲಿ ಬಿಚ್ಚಿತು ಬೋಧಿ
ವೃಕ್ಷದಗ್ನಿಯ ಛತ್ರಿ—ಕೊನೆಯರಾತ್ರಿ!
ನಿದ್ದಿಸಿದ ಮುದ್ದುಮಗುವನು ತಬ್ಬಿ ಕಣ್ಣಿಂದ,

ಕದ್ದು ಅವಳೆಡೆ ಸುತ್ತ ಮುತ್ತ ತೂರಿ
ಎದ್ದು ನಿಂತೆನು ಕೋಟು ತೊಟ್ಟು ಚಪ್ಪಲಿ ಮೆಟ್ಟಿ . . . .

ಇಲ್ಲಿ ಸಿದ್ಧಾರ್ಥನ ಅಂತಿಮರಾತ್ರಿಯಂತೆ ಜೇಪಿಯ ಆಧ್ಯಾತ್ಮಿಕ ಲೋಕಪ್ರಯಾಣದ ಹಿಂದಿನ ರಾತ್ರಿ ಸ್ವಲ್ಪಮಟ್ಟಿಗೆ ಕಾಣುತ್ತದೆ. ಆದರೆ ಈ ನಾಯಕ ಸಿದ್ಧಾರ್ಥನಲ್ಲ, ಬುದ್ಧನಾಗುವುದಿಲ್ಲ. ಈ ವ್ಯತ್ಯಾಸವೂ ಒತ್ತಿ ಕಾಣುತ್ತದೆ.

ಅಡಿಗರು ಹಲವು ಹೊಸಶಬ್ದಗಳನ್ನೂ ಬಳಕೆಯ ನುಡಿಕಟ್ಟುಗಳನ್ನೂ ಕಾವ್ಯದಲ್ಲಿ ಪ್ರಯೋಗಿಸಿದ್ದಾರೆ. 'ಎಲಾ ಇವನ', 'ಬೇಡ ಕಣೊ', 'ಮಾಡುವೆ ಚಟ್ಣಿ', 'ಒಟಗುಟ್ಟುತ್ತಿದ್ದ' 'ಕಲ್ಲುದೇವರನೆಲ್ಲಿ ಕೂರಿಸಿದರೇನು ಮಹ?' 'ಲಕ್ವಾಹೊಡೆದು', 'ಅನಾಮತ್ತು' 'ಸೇಕಡಾ' 'ಥೇಟು' 'ಬೆರೆಸಿ' ಇತ್ಯಾದಿ. ಹಾಗೇ ನಮ್ಮಲ್ಲಿ ಹೆಚ್ಚು ಬಳಕೆಯಲ್ಲಿರುವ ಇಂಗ್ಲಿಷ್‌ಪದಗಳನ್ನು ಇವರು ಉಪಯೋಗಿಸಿಕೊಳ್ಳುವುದು ಅಷ್ಟು ಮೆಚ್ಚುವಂತಹುವಲ್ಲವಾದರೂ ಒಮ್ಮೊಮ್ಮೆ ಅತ್ಯಾವಶ್ಯಕವಾಗುವುದೆಂದು ಒಪ್ಪಬೇಕಾಗುತ್ತದೆ. ಉದಾಹರಣೆಗೆ, 'ಅಲಾರಂ' 'ಸೈಕಲ್', 'ರೈಲ್', 'ಬಸ್', 'ಪೋಲೀಸ್', 'ರಿಪೇರಿ'. ಇವುಗಳಿಗೆ ಕನ್ನಡದಲ್ಲಿ ಪರ್ಯಾಯಪದಗಳು ಸಹಜವಾದುವಿಲ್ಲ. ಆದರೆ 'ವಾಚು' ಎಂದು ಎನ್ನುವ ಕಡೆ 'ಕೈಗಡಿಯಾರ' ಎನ್ನಬಹುದಾಗಿತ್ತು. ಹಾಗೇ 'ಕ್ಲಾರ್ಕ್' 'ಲಾಂಕೋಟು' 'ಬಿಚ್' 'ಬೂರ್ಜ್ವಾ' ಮುಂತಾದುವುಗಳಿಗೆ ಕನ್ನಡದಲ್ಲಿ ಬೇರೆ ಪದಗಳನ್ನು ಉಪಯೋಗಿಸುವುದು ಮೇಲು. 'ಪೋಸ್ಟ್ ಮ್ಯಾನ್' ಎನ್ನುವುದಕ್ಕೆ ಬದಲು 'ಟಪ್ಪಾಲುಪೇದೆ' ಯೆಂದೂ 'ಪ್ಯಾರಾಚೂಟ್' ಎನ್ನುವುದಕ್ಕೆ 'ಕೊಡೆವಿಮಾನ' ವೆಂದೂ ಅಡಿಗರೇ ಈ ಕವನಗಳಲ್ಲಿ ಉಪಯೋಗಿಸಿದ್ದಾರೆ. ಇದು ಸರಿಯಾದ ದಾರಿಯೆಂದು ನನ್ನ ಅಭಿಪ್ರಾಯ. ಕವಿಯ ಗುರಿಯನ್ನು ಎಲಿಯಟ್ ಮಲ್ಲಾರ್ಮೆ ಎಂಬ ಕವಿಯ ಈ ಪಂಕ್ತಿಯಲ್ಲಿ ವಿವರಿಸುತ್ತಾನೆ: 'To purify the dialect of the tribe' ತನ್ನ ಭಾಷೆಯ ಶುದ್ಧತೆಯನ್ನೂ ಸೂಚ್ಯಶಕ್ತಿಯನ್ನೂ ಎರಡನ್ನೂ ಕೂಡಿಯೇ ಕಾಪಾಡುವ ಮತ್ತು ಬೆಳೆಸುವ ಜವಾಬ್ದಾರಿಯನ್ನು ಕವಿ ಮರೆಯಲಾಗದು.

ನವ್ಯಕಾವ್ಯದ ವಿಷಯವಾಗಿ ಇರುವ ಕೆಲವು ತಪ್ಪು ಅಭಿಪ್ರಾಯಗಳನ್ನು ಜನ ಇನ್ನು ಸ್ವಲ್ಪ ಕಾಲದಲ್ಲಿಯೇ ತಿದ್ದಿಕೊಂಡಾರು. ಕಮ್ಯುನಿಸ್ಟ್ ವಿಮರ್ಶಕರು ನವ್ಯಕಾವ್ಯದಲ್ಲಿ ನಿರಾಸೆಯು ವ್ಯಕ್ತವಾಗುವುದೆಂದೂ ಅದರಲ್ಲಿನ ಆಧ್ಯಾತ್ಮಿಕದ ಒಲವು ನಿಜವಾಗಿ ಪ್ರಗತಿಯಲ್ಲವೆಂದೂ ಟೀಕಿಸುತ್ತಾರೆ. ಆದರೆ ಕಾವ್ಯವಾಗಿದೆಯೇ ಇಲ್ಲವೇ ಎನ್ನುವುದನ್ನು ನೋಡಬೇಕೇ ಹೊರತು ಅದರ ವಸ್ತು ನಮ್ಮ ದೃಷ್ಟಿಗೆ ಒಪ್ಪಿಗೆಯಾಗುತ್ತೆಯೇ ಇಲ್ಲವೇ ಎಂದು ನೋಡಬಾರದು. 'ಸಿದ್ಧಶೈಲಿ'ಯ ಬೆಂಬಲಿಗರು ನವ್ಯಕಾವ್ಯದಲ್ಲಿ ಅರ್ಥವಾಗದ ಕ್ಲಿಷ್ಟತೆಯಿದೆಯೆನ್ನುತ್ತಾರೆ. ಬಿಗಿಯಾಗಿ ನಾಟಕೀಯವಾಗಿ ಬರೆಯುವಾಗ ಜನಸಾಮಾನ್ಯಕ್ಕೂ ಅರ್ಥವಾಗುವಂತೆ, ಸಲೀಸಾಗಿ ಅಯತ್ನವಾಗಿ ಅರ್ಥವಾಗುವಂತೆ, ಹೇಗೆ ಬರೆಯಲಾದೀತು? ಇನ್ನೊಂದು ಆಪಾದನೆಯೆಂದರೆ, 'ನವ್ಯಕವಿಗಳು ಓದುಗನನ್ನು ಒಮ್ಮೆ ಹಾಲಿನಲ್ಲದ್ದುತ್ತಾರೆ. ಒಮ್ಮೆ ಗಂಜಲದಲ್ಲಿ ಅದ್ದುತ್ತಾರೆ' ಎಂಬುದು. ಇದು ವಿಧಿಯ ತಪ್ಪು. ಏಕೆ ಅದು ನಮಗೆ ಶಕ್ತಿ ದೌಬಲ್ಯ, ಆಸೆ ನಿರಾಸೆ, ಸೌಂದರ್ಯ ಅಸಹ್ಯತೆ, ಸೋಲು ಗೆಲವುಗಳನ್ನೂ ಪಾಪ ಪುಣ್ಯ, ನರಕ ಸ್ವರ್ಗಗಳನ್ನೂ ಕೊಡಬೇಕು? ಇವುಗಳಲ್ಲಿ ಹಂಸಕ್ಷೀರನ್ಯಾಯದಂತೆ ಸುಂದರವಾದುದನ್ನು ಮಾತ್ರ ತೆಗೆದುಕೊಂಡು ಬರೆಯಬೇಕೆಂಬುದನ್ನು ಯಾವ ನೈಜಕವಿಯೂ ಒಪ್ಪಲಾರನು. ಹೂವಿನ ಸೊಗಕ್ಕೆ ಬಾಳನು ಕೊಟ್ಟ ಬೇರಿನ ಗೋಳನ್ನಾಗಲೀ ಹೃದಯದಾಸೆಯ ಗಾಳಿಗೋಪುರ ಮತ್ತೆ ಮತ್ತೆ ಮಣ್ಣುಮುಕ್ಕುವುದನ್ನಾಗಲೀ ಅವನು ಮರೆಯಲಾರ. ಪ್ರಕೃತಿಸ್ವರ್ಗವನ್ನು ಮಾತ್ರ ಚಿತ್ರಿಸಿ ನಗರನರಕವನ್ನು ಬಿಡುವುದೇಕೆ? ಗದ್ಯಕ್ಕೆ ವಸ್ತುವಾಗುವುದು ಪದ್ಯಕ್ಕೂ ವಸ್ತುವಾಗ ಬಲ್ಲುದು; ಅವುಗಳ ರಚನಾಕ್ರಮ ಬೇರೆ ಬೇರೆ ಅಷ್ಟೆ. ಮತ್ತೊಂದು ಆಪಾದನೆ ಸ್ವತಂತ್ರ ಛಂದಸ್ಸಿನಲ್ಲಿ ಶಿಲ್ಪರೂಪ ಬರುವುದಿಲ್ಲವೆಂಬುದು. ಆದರೆ ಕಟ್ಟುನಿಟ್ಟಾದ ಛಂದೋರೂಪದಲ್ಲಿ ಹಿರಿಯ ಕವಿಗಳು ಹೊಸಗತಿಗಳನ್ನು ಬರಿಸಿ ಏಕತ್ವದಲ್ಲಿ ಬಹುತ್ವವನ್ನು ತರಬಹುದಾದಷ್ಟುದಿನ ತರುವಂತೆ, ನವ್ಯಕವಿ ಬಹುತ್ವದಲ್ಲಿ, ಭಿನ್ನತೆಯಲ್ಲಿ, ಏಕತ್ವ ಸಿದ್ಧಿಸುವಂತೆ ರಚಿಸಬಲ್ಲ. ಒಟ್ಟಿನಲ್ಲಿ ವರ್ಡ್ಸ್‌ವರ್ತ್ ಹೇಳಿದಂತೆ 'Each poet has to create the taste by which

he is to be judged.' ಹಿಂದೆ ಆರಂಭವಾದ ನವ್ಯಶೈಲಿ ಹೇಗೆ ಇಂದು ಎಲ್ಲರಿಗೂ ಒಪ್ಪಿಗೆಯಾದ ಸಿದ್ಧಶೈಲಿಯಾಗಿದೆಯೋ ಹಾಗೇ ಇನ್ನಿಪ್ಪತ್ತು ವರ್ಷದಲ್ಲಿ ಇಂದಿನ ನವ್ಯಶೈಲಿಯೂ 'ಸಿದ್ಧಶೈಲಿ' ಯಾಗಿ ಮುಂದಿನ ಕವಿಗಳಿಗೆ ಕಾಲ್ತೊಡಕಾದೀತು. ನವ್ಯಕವಿಗಳನ್ನು ಇಂದಿನ 'ಸಿದ್ಧಶೈಲಿ' ಯ ಬೆಂಬಲಿಗರು ತೆಗಳಬಾರದು, ಅಪಹಾಸ್ಯಮಾಡಬಾರದು. ನವ್ಯಕವಿಗಳೂ ಬೆಂಬಲಿಗರೂ ಅಂತೆಯೇ ಸಿಟ್ಟಿನಿಂದ ಮತಿಗೆಟ್ಟು ಹಿರಿಯ ಕವಿಗಳ ಅದ್ಭುತ ಕೃತಿಗಳ ಅವಹೇಳನ ಮಾಡಬಾರದು. ನವ್ಯಕವಿಗಳ ನಡವೆಯ ಅತ್ಯುತ್ತಮ ವಿವರಣೆಯನ್ನು ಹಾಪ್‌ಕಿನ್ಸ್‌ನ ಈ ಮಾತಿನಲ್ಲಿ ಕೊಡಬಹುದು. 'Admire and do otherwise.'

೧೩, ಗರ್ಲ್ಸ್‌ಸ್ಕೂಲ್ ರಸ್ತೆ
ಮಾವಳ್ಳಿ, ಬೆಂಗಳೂರು.

**ಕೆ. ನರಸಿಂಹಮೂರ್ತಿ.**

